# ಕರ್ನಾಟಕ ಸರ್ಕಾರ

ಸಂ:ಕೃಇ 147 ಕೃಯೋಕೆ 2018

ಕರ್ನಾಟಕ ಸರ್ಕಾರದ ಸಚಿವಾಲಯ
ಸುವರ್ಣಸೌಧ
ಬೆಳಗಾವಿ, ದಿನಾಂಕ: 14 .12.2018

**ಇವರಿಂದ,**

ಸರ್ಕಾರದ ಕಾರ್ಯದರ್ಶಿಗಳು,
ಕೃಷಿ ಇಲಾಖೆ,
ಸುವರ್ಣಸೌಧ, ಬೆಳಗಾವಿ

**ಇವರಿಗೆ,**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ/ಪರಿಷತ್
ಸುವರ್ಣಸೌಧ,
ಬೆಳಗಾವಿ.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆ/ಪರಿಷತ್ ಸದಸ್ಯರಾದ ಶ್ರೀ. ಉಮಾನಾಥ ಎ. ಕೋಟ್ಯಾನ್ ರವರ ಚುಕ್ಕೆ ಗುರುತು/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1098 ಗೆ ಉತ್ತರ ಒದಗಿಸುವ ಬಗ್ಗೆ.

*******

ಮಾನ್ಯ ವಿಧಾನ ಸಭೆ/ಪರಿಷತ್ ಸದಸ್ಯರಾದ ಶ್ರೀ. ಉಮಾನಾಥ ಎ. ಕೋಟ್ಯಾನ್ ರವರ ಚುಕ್ಕೆ ಗುರುತು/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1098 ಗೆ ಉತ್ತರದ 250 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

ಸರ್ಕಾರದ ಅಧೀನ ಕಾರ್ಯದರ್ಶಿ
ಕೃಷಿ ಇಲಾಖೆ (ಯೋಜನೆ)

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1098 |
| ಸದಸ್ಯರ ಹೆಸರು | ಶ್ರೀ. ಉಮಾನಾಥ ಎ. ಕೋಟ್ಯಾನ್ |
| ಉತ್ತರಿಸಬೇಕಾದ ದಿನಾಂಕ | 14-12-2018 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕೃಷಿ ಚಟುವಟಿಕೆಗಳನ್ನು ಹೆಚ್ಚಿಸುವ ದಿಶೆಯಲ್ಲಿ ಪ್ರೋತ್ಸಾಹಕ ಮತ್ತು ಪರಿಣಾಮಕಾರಿ ಯೋಜನಗಳಾವುವು; (ವಿವರ ನೀಡುವುದು) | **ಅನುಬಂಧ-1 ರಲ್ಲಿ ನೀಡಲಾಗಿದೆ.** |
| ಆ) | ಯುವಕರು ಕೃಷಿ ಚಟುವಟಿಕೆಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ತೊಡಗಿಸಿಕೊಳ್ಳುವ ಮತ್ತು ಲಾಭದಾಯಕ ಕೃಷಿ ವ್ಯವಸ್ಥೆಯನ್ನು ಜನಪ್ರಿಯಗೊಳಿಸುವ ಸಲುವಾಗಿ ಇಲಾಖೆಯ ನೂತನ ಕಾರ್ಯಕ್ರಮಗಳು ಯಾವುವು; | **ಅನುಬಂಧ-2 ರಲ್ಲಿ ನೀಡಲಾಗಿದೆ.** |
| ಇ) | ಕೃಷಿಕರು ಬೆಳೆಯುವ ಬೆಳೆಗಳಿಗೆ ಸೂಕ್ತ ಮಾರುಕಟ್ಟೆ ಹಾಗೂ ಬೆಂಬಲ ಬೆಲೆ ಒದಗಿಸಿ ಕೊಡುವಲ್ಲಿನ ಜನಪ್ರಿಯ ಹಾಗೂ ಸರಳ ಯೋಜನೆಗಳು ಯಾವುವು? | ಕೃಷಿಕರು ಬೆಳೆಯುವ ಬೆಳೆಗಳಿಗೆ ಸೂಕ್ತ ಮಾರುಕಟ್ಟೆ ಕಲ್ಪಿಸುವ ಉದ್ದೇಶದಿಂದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಅಧಿಸೂಚಿತ ಕೃಷಿ ಉತ್ಪನ್ನಗಳ ಸಗಟು ವಹಿವಾಟಿಗೆ ಪೂರಕವಾಗಿ ಮಾರುಕಟ್ಟೆ ಸೌಲಭ್ಯಗಳನ್ನು ಒದಗಿಸಲು ಪ್ರಾಂಗಣ ಅಭಿವೃದ್ಧಿ ಪಡಿಸಿ, ವ್ಯಾಪಾರ ವಹಿವಾಟಿನ ಮೇಲೆ ನಿಯಂತ್ರಣ ಕ್ರಮಗಳನ್ನು ಜರುಗಿಸಿ ರೈತ ಬೆಳೆಗಾರರಿಗೆ ಸ್ಪರ್ಧಾತ್ಮಕ ಧಾರಣೆ ದೊರೆಯಲು ಉತ್ತಮ ಮಾರಾಟ ಪದ್ಧತಿಯು ಜಾರಿಯಲ್ಲಿರುತ್ತದೆ.<br>ರಾಜ್ಯದಲ್ಲಿ ಮಾರುಕಟ್ಟೆ ಸುಧಾರಣೆ ಅಂಗವಾಗಿ ಸರ್ಕಾರವು "ಕೃಷಿ ಮಾರಾಟ ನೀತಿ 2013" ಯನ್ನು ಜಾರಿಗೆ ತಂದು ಏಕೀಕೃತ ಮಾರುಕಟ್ಟೆ ವೇದಿಕೆಯ ಮೂಲಕ ವ್ಯಾಪಾರದಲ್ಲಿ ಪಾರದರ್ಶಕತೆ ದಕ್ಷತೆ, ಸರಳತೆ ಹಾಗೂ ಸ್ಪರ್ಧೆಯಲ್ಲಿ ಹೆಚ್ಚಳವನ್ನು ಕಲ್ಪಿಸಿ ಉತ್ತಮ ಮಾರುಕಟ್ಟೆ ವ್ಯವಸ್ಥೆಯನ್ನು ಜಾರಿಗೊಳಿಸಲಾಗಿದೆ.<br>ಕೇಂದ್ರ ಸರ್ಕಾರವು ಪ್ರತಿ ವರ್ಷ ಮುಂಗಾರು ಮತ್ತು ಹಿಂಗಾರು ಹಂಗಾಮುಗಳ ಪೂರ್ವದಲ್ಲಿ ಉತ್ಪನ್ನಗಳ ಉತ್ಪಾದನಾ ವೆಚ್ಚದ ಆಧಾರದ ಮೇಲೆ ಪ್ರಮುಖ ಕೃಷಿ ಮತ್ತು ತೋಟಗಾರಿಕಾ ಉತ್ಪನ್ನಗಳಿಗೆ ಕನಿಷ್ಟ ಬೆಂಬಲ ಬೆಲೆ (Minimum Support Price) ಘೋಷಿಸುತ್ತದೆ. ಕೃಷಿ ಉತ್ಪನ್ನಗಳ ಧಾರಣೆಯು ಮಾರುಕಟ್ಟೆಯಲ್ಲಿ ಕುಸಿತಗೊಂಡಾಗ ರೈತರು ಒತ್ತಡಾತ್ಮಕವಾಗಿ ಮಾರಾಟ ಮಾಡುವುದನ್ನು ತಪ್ಪಿಸಲು ಕೇಂದ್ರ ಸರ್ಕಾರದ |

| ಕ್ರ. ಸಂ. | ಪ್ರಶ್ನೆ | ಉತ್ತರ |
| --- | --- | --- |
| | | ಅನುಮೋದನೆಯೊಂದಿಗೆ ಬೆಂಬಲ ಬೆಲೆ ಯೋಜನೆ, ಮಾರುಕಟ್ಟೆ ಮಧ್ಯಪ್ರವೇಶ ಯೋಜನೆ, Buffer Stock ಯೋಜನೆ ಹಾಗೂ ಪಿ.ಡಿ.ಪಿ.ಎಸ್ (Price deficiency Payment Scheme) ಯೋಜನೆಗಳಡಿಯಲ್ಲಿ ಉತ್ಪನ್ನಗಳನ್ನು ಖರೀದಿಸಲಾಗುತ್ತದೆ.<br><br>ಸದರಿ ಯೋಜನೆಗಳ ಜೊತೆಗೆ ರಾಜ್ಯ ಸರ್ಕಾರವು ಬೇಗ ನಸಿಸಿ ಹೋಗುವ ತೋಟಗಾರಿಕೆ ಬೆಳೆಗಳಾದ ಈರುಳ್ಳಿ, ಟೊಮ್ಯಾಟೊ ಹಾಗೂ ಇತರೆ ಉತ್ಪನ್ನಗಳನ್ನು ಫ್ಲೋರ್ ಪ್ರೈಸ್ ಯೋಜನೆಯ ಬೆಂಬಲ ಬೆಲೆಯಲ್ಲಿ ಖರೀದಿಸಿ ರೈತರಿಗೆ ಅನುಕೂಲ ಕಲ್ಪಿಸಲಾಗುತ್ತಿದೆ. |

**ಸಂಖ್ಯೆ: ಕೃಇ 147 ಕೃಇಕ 2018**

(ಎನ್.ಎಚ್.ಶಿವಶಂಕರ ರೆಡ್ಡಿ)
ಕೃಷಿ ಸಚಿವರು

**ಅನುಬಂಧ-1**

# LAQ 1098

## ರಾಜ್ಯದಲ್ಲಿ ಕೃಷಿ ಚಟುವಟಿಕೆಗಳನ್ನು ಹೆಚ್ಚಿಸುವ ದಿಶೆಯಲ್ಲಿ ಪ್ರೋತ್ಸಾಹಕ ಮತ್ತು ಪರಿಣಾಮಕಾರಿ ಯೋಜನೆಗಳ ವಿವರ

**ರಾಜ್ಯ ವಲಯ ಯೋಜನೆಗಳು**

1. **ಕೃಷಿ ಭಾಗ್ಯ:** ಮಳೆ ಆಶ್ರಿತ ರೈತರನ್ನು ಕೇಂದ್ರೀಕರಿಸಿ ಮಳೆ ನೀರು ಸಂಗ್ರಹಣೆ ಮತ್ತು ಪುನರ್ ಬಳಕೆಗೆ ಆದ್ಯತೆ ನೀಡಿ ಕೃಷಿ ಭಾಗ್ಯ ಯೋಜನೆಯನ್ನು ಪ್ರಸಕ್ತ ರಾಜ್ಯದ 25 ಜಿಲ್ಲೆಗಳ 132 ತಾಲ್ಲೂಕುಗಳಲ್ಲಿ, ಕರಾವಳಿ ಮತ್ತು ಮಲೆನಾಡು ಪ್ರದೇಶಗಳು ಒಳಗೊಂಡಂತೆ (ಅಚ್ಚುಕಟ್ಟು ಪ್ರದೇಶಗಳನ್ನು ಹೊರತುಪಡಿಸಿ) ಅನುಷ್ಠಾನಗೊಳಿಸಲಾಗುತ್ತಿದೆ. ಕೃಷಿ ಭಾಗ್ಯ ಯೋಜನೆಯ ವಿವಿಧ ಘಟಕಗಳಾದ ನೀರು ಸಂಗ್ರಹಣಾ ರಚನೆಗಳು [ಕೃಷಿ ಹೊಂಡ], ಪಾಲಿಥೀನ್ ಹೊದಿಕೆ/ಪರ್ಯಾಯ ಮಾದರಿ, ನೀರು ಎತ್ತಲು ಡೀಸಲ್/ಸೋಲಾರ್ ಪಂಪ್‌ಸೆಟ್, ನೀರು ಹಾಯಿಸಲು ಲಘು ನೀರಾವರಿ ಘಟಕ, ಕೃಷಿ ಹೊಂಡದ ಸುತ್ತಲೂ ನೆರಳು ಪರದೆ (Shadenet), ಒಣ ಬೇಸಾಯ ಪದ್ಧತಿ (Recharge of functional borewells) ಅನುಷ್ಠಾನಕ್ಕೆ ಒದಗಿಸಲಾಗುತ್ತಿದೆ. ವಿಶೇಷ ಪ್ಯಾಕೇಜನ್ನು 23 ತಾಲ್ಲೂಕುಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ.

2. **ಇತರೆ ಕೃಷಿ ಯೋಜನೆಗಳು:**

**ಅ. ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಗಳಿಗೆ ಪರಿಹಾರಧನ ಮತ್ತು ಹಾವು ಕಡಿತಕ್ಕೆ ಪರಿಹಾರ** : ಈ ಕಾರ್ಯಕ್ರಮದಡಿ ಸಾಲದ ಹೊರೆಯಿಂದ ಆತ್ಮಹತ್ಯೆ ಮಾಡಿಕೊಂಡ ರೈತ ಕುಟುಂಬಗಳಿಗೆ ರೂ.5.00 ಲಕ್ಷ ಪರಿಹಾರ ಧನವನ್ನು ನೀಡಲಾಗುತ್ತಿದೆ. ಹಾವು ಕಡಿತದಿಂದ, ಮರಗಳಿಂದ ಬಿದ್ದು ಹಾಗೂ ಕೃಷಿಗೆ ಸಂಬಂಧಿಸಿದ ಇತರೆ ಆಕಸ್ಮಿಕಗಳಿಂದ ಮರಣ ಹೊಂದಿದ ರೈತರು ಮತ್ತು ಕೃಷಿ ಕಾರ್ಮಿಕರ ಪ್ರತಿ ಅರ್ಹ ಕುಟುಂಬಕ್ಕೆ ರೂ.2.00 ಲಕ್ಷ ಪರಿಹಾರ ಧನ ಹಾಗೂ ಬೆಂಕಿ ಆಕಸ್ಮಿಕದಿಂದ ಹುಲ್ಲು ಮೆದೆ/ ಬಣವೆಗಳು ನಷ್ಟವಾದಲ್ಲಿ ಗರಿಷ್ಠ ರೂ.20,000/- ಸಹಾಯಧನ ನೀಡಲಾಗುತ್ತಿದೆ.

**ಇ. ಕೃಷಿ ಪ್ರಶಸ್ತಿ ಹಾಗೂ ಕೃಷಿ ಪಂಡಿತ್ ಪ್ರಶಸ್ತಿ** : ರೈತರಿಗೆ ಉತ್ಪಾದನಾ ಬಹುಮಾನಗಳು-ರಾಜ್ಯದ ರೈತರಲ್ಲಿ ಹೆಚ್ಚಿನ ಉತ್ಪಾದನೆ ಮಾಡುವ ಮನೋಭಾವ ಉಂಟುಮಾಡಲು ತಾಲ್ಲೂಕುಮಟ್ಟದಲ್ಲಿ, ಜಿಲ್ಲಾ ಮಟ್ಟದಲ್ಲಿ ಮತ್ತು ರಾಜ್ಯಮಟ್ಟದಲ್ಲಿ ಬೆಳೆ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನಗಳನ್ನು ನೀಡಲಾಗುತ್ತಿದೆ. ಕೃಷಿ ಕ್ಷೇತ್ರದಲ್ಲಿ ಅಮೂಲ್ಯ ಅನ್ವೇಷಣೆ ಹಾಗೂ ಸೃಜನಾತ್ಮಕ ಕಾರ್ಯಗಳನ್ನು ಕೈಗೊಂಡ ರೈತರನ್ನು ಗುರುತಿಸಿ ಅವರುಗಳಿಗೆ ಪ್ರಶಸ್ತಿ ನೀಡಲಾಗುತ್ತಿದೆ. ರಾಜ್ಯಮಟ್ಟದ ವಿಜೇತರನ್ನು ಸನ್ಮಾನಿಸುವ ಸಂಬಂಧ ತಗಲುವ ಎಲ್ಲಾ ವೆಚ್ಚಗಳನ್ನು ಭರಿಸಲಾಗುತ್ತದೆ(ಬಹುಮಾನ, ಸಮಾರಂಭ ಆಯೋಜನೆ, ಇತ್ಯಾದಿ).

**ಈ. ಬೆಳೆ ಸಾಲಕ್ಕೆ ಸಹಾಯಧನ:** ರಾಜ್ಯದ ರೈತರಿಗೆ ನೀಡಿದ ಬೆಳೆ ಸಾಲ/ಅಲ್ಪಾವಧಿ ಸಾಲಕ್ಕೆ ನಿಗದಿತ ಅವಧಿಯಲ್ಲಿ ಸಾಲ ಮರುಪಾವತಿ ಮಾಡಿದ ರೈತರಿಗೆ ಶೇ.1ರ ಬಡ್ಡಿ ರಿಯಾಯಿತಿ ನೀಡಲು (ಸರ್ಕಾರಿ ಸ್ವಾಮ್ಯದ ವಾಣಿಜ್ಯ ಬ್ಯಾಂಕುಗಳು ಹಾಗು ಪ್ರಾದೇಶಿಕ ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳ ಮೂಲಕ ಗರಿಷ್ಟ ರೂ. 1.00 ಲಕ್ಷ ಮಿತಿಯೊಳಗೆ) ಬಳಸಿಕೊಳ್ಳಲಾಗುತ್ತಿದೆ. ಶೂನ್ಯ ಬಡ್ಡಿಯಲ್ಲಿ ರೂ. 3.00 ಲಕ್ಷದವರೆಗೆ ಮತ್ತು ಶೇ. 3 ರ ಬಡ್ಡಿ ದರದಲ್ಲಿ ರೂ.10.00 ಲಕ್ಷದವರೆಗೆ ರೈತರಿಗೆ ಬೆಳೆ ಸಾಲ ನೀಡಲಾಗುತ್ತಿದೆ.

**ಉ. ಆಹಾರ ಸಂಸ್ಕರಣೆಗೆ ಮತ್ತು ಕೃಷಿ ಬಂಡವಾಳ ಹೂಡಿಕೆ :** ಈ ಕಾರ್ಯಕ್ರಮದಡಿ ಕೃಷಿ ಮತ್ತು ಕೃಷಿಯೇತರ ಕ್ಷೇತ್ರದಲ್ಲಿ ಮೂಲ ಸೌಕರ್ಯವನ್ನು ಒದಗಿಸಲು, ಸಂಸ್ಕರಣಾ ಘಟಕಗಳನ್ನು ಸ್ಥಾಪಿಸಲು, ಶೀತಲ ಗೃಹಗಳ ನಿರ್ಮಾಣ, ಉಗ್ರಾಣ ನಿರ್ಮಾಣ ಹಾಗೂ ಮಾರುಕಟ್ಟೆಗಳ ನಿರ್ವಹಣೆ ಮತ್ತು ಅಭಿವೃದ್ಧಿ ಹಾಗೂ ಇತರೆ ಸಂಬಂಧಿತ ಚಟುವಟಿಕೆಗಳನ್ನು ಕೈಗೊಳ್ಳಲಾಗುತ್ತಿದೆ.

**ಊ. ಕೃಷಿ ಬೆಲೆ ಆಯೋಗ:** ಕೃಷಿ ಉತ್ಪನ್ನಗಳಿಗೆ ಪ್ರತಿಫಲ ಬೆಲೆ ಒದಗಿಸುವುದು, ಮಾರುಕಟ್ಟೆಯ ಮೂಲ ಸೌಕರ್ಯವನ್ನು ಉತ್ತಮಗೊಳಿಸುವುದು, ಬೆಲೆ ಮತ್ತು ಬೆಲೆಯೇತರ ಕ್ರಮಗಳಿಂದ ಮಾರುಕಟ್ಟೆ ಸ್ಥಿರೀಕರಿಸುವುದು, ಹೆಚ್ಚಿನ ಉತ್ಪಾದನೆ ಸಮಯದಲ್ಲಿ ಮಾರುಕಟ್ಟೆ ಮಧ್ಯಪ್ರವೇಶ, ರೈತರಿಗೆ ಲಾಭದಾಯಕ ಬೆಲೆ ಪಡೆಯುವುದಕ್ಕಾಗಿ ಚೌಕಾಶಿ ಸಾಮರ್ಥ್ಯ ಮತ್ತು ಮಾರುಕಟ್ಟೆ ಸುಧಾರಣೆ, ಬೆಳೆ ವಿಮೆ, ಇ-ವ್ಯಾಪಾರ ಮೂಲಕ ಕೃಷಿ ಸಮೂದಾಯದ ಮೂಲ ಉದ್ದೇಶವಾಗಿರುತ್ತದೆ.

***ಋ.ನೆಲಗಡಲೆ ವಿಶೇಷ ಪ್ಯಾಕೇಜ್ (ಹೊಸ ಕಾರ್ಯಕ್ರಮ):*** ಇತ್ತೀಚೆಗೆ ಎಣ್ಣೆಬೀಜ ಬೆಳೆ ಬೆಳೆಯುವ ಕ್ಷೇತ್ರವು ಇಳಿಮುಖವಾಗುತ್ತಿರುವ ಪ್ರವೃತ್ತಿಯನ್ನು ಸುಧಾರಿಸಲು ನೆಲಗಡಲೆ ಬೆಳೆ ಬೆಳೆಯುವ ರೈತರಿಗೆ ಸಹಾಯ ಮಾಡಲು ಮತ್ತು ಹೆಚ್ಚು ನೆಲಗಡಲೆಯನ್ನು ಉತ್ಪಾದಿಸಲು ನೆಲಗಡಲೆ ವಿಶೇಷ ಪ್ಯಾಕೇಜ್‌ನ್ನು ಪ್ರಾರಂಭಿಕವಾಗಿ ತುಮಕೂರು ಜಿಲ್ಲೆಯ ಪಾವಗಡ, ಸಿರಾ ಮತ್ತು ಮಧುಗಿರಿ ತಾಲ್ಲೂಕುಗಳು ಹಾಗೂ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಮತ್ತು ಚಳ್ಳಕೆರೆಯಲ್ಲಿ ರೂಪಿಸಲಾಗಿದೆ.

**3. ಕೃಷಿ ಪರಿಕರಗಳು ಮತ್ತು ಗುಣಮಟ್ಟ ನಿಯಂತ್ರಣ:**

**ಅ. ಮಣ್ಣು ಆರೋಗ್ಯ ಅಭಿಯಾನ:** ರಾಜ್ಯದ ಎಲ್ಲಾ ರೈತ ಹಿಡುವಳಿದಾರರಿಗೆ ಪ್ರತಿ 2 ವರ್ಷಗಳಿಗೊಮ್ಮೆ ಮಣ್ಣು ಆರೋಗ್ಯ ಚೀಟಿ ವಿತರಿಸುವುದು ಹಾಗೂ ಪೋಷಕಾಂಶಗಳ ಕೊರತೆ ನೀಗಿಸಲು, ಮಣ್ಣು ಪರೀಕ್ಷೆ ಆಧಾರಿತ ರಸಗೊಬ್ಬರ ಬಳಕೆ ಮಾಡಲು ಅಭಿಯಾನ ರೂಪದಲ್ಲಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗುತ್ತಿದೆ.

**ಆ. ಬೀಜಗಳ ಪೂರೈಕೆ:** ಈ ಕಾರ್ಯಕ್ರಮದಡಿ ರಾಜ್ಯದ ಸಾಮಾನ್ಯ ವರ್ಗದ ರೈತರಿಗೆ ಶೇ.50 ರ ರಿಯಾಯಿತಿ ದರದಲ್ಲಿ ಹಾಗೂ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡ ರೈತರಿಗೆ ಶೇ. 75ರ ರಿಯಾಯಿತಿ ದರದಲ್ಲಿ ಭತ್ತ, ರಾಗಿ, ಜೋಳ, ಮುಸುಕಿನ ಜೋಳ, ಸಜ್ಜೆ, ತೊಗರಿ, ಹೆಸರು, ಉದ್ದು, ಅಲಸಂದೆ, ನೆಲಗಡಲೆ, ಸೂರ್ಯಕಾಂತಿ, ಸೋಯಾ ಅವರೆ, ಹತ್ತಿ ಇತ್ಯಾದಿ ಬೆಳೆಗಳ ಪ್ರಮಾಣಿತ/ನೀಜಚೀಟಿ ಬಿತ್ತನೆ ಬೀಜಗಳನ್ನು ವಿತರಸಲಾಗುತ್ತಿದೆ.

**ಇ. ಸಸ್ಯ ಸಂರಕ್ಷಣೆ** – ಈ ಕಾರ್ಯಕ್ರಮದಡಿ ರಾಜ್ಯದಲ್ಲಿ ಬೆಳೆಯುವ ಕೃಷಿ ಬೆಳೆಗಳನ್ನು ಬಾಧಿಸುವ ಕೀಟ/ರೋಗಗಳನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಲು ಮತ್ತು ಸಂಗ್ರಹಿಸಿದ ಧಾನ್ಯಗಳನ್ನು ಕೀಟ/ರೋಗಗಳಿಂದ ಸಂರಕ್ಷಿಸಲು, ರಿಯಾಯಿತಿಯಲ್ಲಿ ಜೈವಿಕ ಪೀಡೆನಾಶಕ, ಜೈವಿಕ ನಿಯಂತ್ರಣಾಕಾರಕಗಳ, ವೈಜ್ಞಾನಿಕ ಧಾನ್ಯ ಸಂಗಹಣೆಗಾಗಿ ಸುಧಾರಿತ ಪೆಟ್ಟಿಗೆಗಳ, ಅವಶ್ಯಕತೆಗೆ ಅನುಗುಣವಾಗಿ ಕೀಟ/ ರೋಗ ನಿರ್ವಹಣೆಗೆ ಶೇ.50ರ ರಿಯಾಯಿತಿಯಲ್ಲಿ ಹಾಗೂ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡ ರೈತರಿಗೆ ಶೇ.75ರ ರಿಯಾಯಿತಿ ದರದಲ್ಲಿ ಪೀಡೆನಾಶಕಗಳ ವಿತರಣೆ ಮಾಡಲಾಗುತ್ತಿದೆ. ಇಲಾಖೆಯಲ್ಲಿ ಅನುಷ್ಠಾನಗೊಳಿಸುತ್ತಿರುವ ಬೀಜ, ರಸಗೊಬ್ಬರ ಮತ್ತು ಕೀಟನಾಶಕ ಕಾಯ್ದೆ ಮತ್ತು ಕಾನೂನು ಕ್ರಮಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಗುಣ ನಿಯಂತ್ರಣ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಹಾಗೂ ಬೀಜೋಪಚಾರ ಆಂದೋಲನ ಮತ್ತು ಸುರಕ್ಷಿತ ಕೀಟನಾಶಕಗಳ ಬಳಕೆ ಕುರಿತು ತರಬೇತಿ ನೀಡಲಾಗುತ್ತಿದೆ.

**ಈ. ಮಣ್ಣಿನ ಸತ್ವ ಹೆಚ್ಚಿಸುವಿಕೆ:** ಮಣ್ಣಿನ ಫಲವತ್ತತೆ ಹಾಗೂ ಉತ್ಪಾದಕತೆಯನ್ನು ಹೆಚಿಸಲು ರಿಯಾಯಿತಿ ದರದಲ್ಲಿ ಕೃಷಿ ಪರಿಕರಗಳ ವಿತರಣೆ (ಹಸಿರೆಲೆ ಗೊಬ್ಬರ ಬೀಜ, ಜಿಪ್ಸಂ / ಕೃಷಿ ಸುಣ್ಣ, ಲಘು ಪೋಷಕಾಂಶಗಳು, ಜೈವಿಕ ಗೊಬ್ಬರಗಳು), ಸಾವಯವ ಗೊಬ್ಬರ'ಗಳ ವಿತರಣೆ (ಎರೆಹುಳು ಗೊಬ್ಬರ, ಸಿಟಿ ಕಾಂಪೋಸ್ಟ್), ಸಾವಯವ ಗೊಬ್ಬರ'ಗಳ ಉತ್ಪಾದನೆಗೆ ಪ್ರೋತ್ಸಾಹಧನ (ಬಯೋಡೈಜೆಸ್ಟರ್ ಘಟಕ ಸ್ಥಾಪನೆ, ಕಡಿಮೆ ವೆಚ್ಚದ ಎರೆಹುಳು ಗೊಬ್ಬರ ಉತ್ಪಾದನಾ ಘಟಕ ಸ್ಥಾಪನೆ). ಸಾಮಾನ್ಯ ವರ್ಗದ ರೈತರಿಗೆ ಶೇ.50 ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ರೈತರಿಗೆ ಶೇ. 75ರ ರಿಯಾಯಿತಿ ದರದಲ್ಲಿ ಮೇಲಿನ ಕೃಷಿ ಪರಿಕರಗಳನ್ನು ವಿತರಿಸಲಾಗುತ್ತಿದೆ.

**ಉ. ಕೃಷಿ ಯಾಂತ್ರೀಕರಣ ಮತ್ತು ಕೃಷಿ ಸಂಸ್ಕರಣೆ :** ಈ ಯೋಜನೆಯಡಿ ರೈತರಿಗೆ ಸಣ್ಣ ಟ್ರಾಕ್ಟರ್, ಪವರ್ ಟಿಲ್ಲರ್, ಭೂಮಿ ಸಿದ್ಧತೆ ಉಪಕರಣಗಳು, ನಾಟಿ/ಬಿತ್ತನೆ ಉಪಕರಣಗಳು, ಕುಯ್ಲು ಮತ್ತು ಒಕ್ಕಣೆ ಉಪಕರಣಗಳು, ಡೀಸೆಲ್ ಪಂಪು ಸೆಟ್ಟು, ಅಂತರ ಬೇಸಾಯ ಉಪಕರಣಗಳು ಹಾಗೂ ಸಸ್ಯ ಸಂರಕ್ಷಣಾ ಉಪಕರಣಗಳನ್ನು ಕೃಷಿ ಸಂಸ್ಕರಣೆ ಘಟಕಗಳು ಹಾಗೂ ಟಾರ್ಪಾಲಿನ್ ಸಹಾಯಧನದಡಿ ವಿತರಿಸಲಾಗುತ್ತಿದೆ. ರೂ.2.00 ಲಕ್ಷದವರೆಗೆ ಇರುವ ಕೃಷಿ ಯಂತ್ರೋಪಕರಣಗಳನ್ನು ಪ್ರತಿ ರೈತ ಫಲಾನುಭವಿಗಳಿಗೆ ನೀಡಲಾಗುತ್ತಿದ್ದು, ಸಾಮಾನ್ಯ ವರ್ಗದ ರೈತರಿಗೆ ಶೇ.50 ರಷ್ಟು ಸಹಾಯಧನವನ್ನು ಗರಿಷ್ಠ ಮಿತಿ ರೂ.1.00 ಲಕ್ಷದವರೆಗೆ ಹಾಗೂ ಸಣ್ಣ ಟ್ರಾಕ್ಟರ್‌ಗಳಿಗೆ ರೂ.75,000/- ಸಹಾಯಧನ ನೀಡಲಾಗುತ್ತಿದೆ. ರೂ.5.00ಲಕ್ಷದವರೆಗೆ ಇರುವ ಕೃಷಿ ಉಪಕರಣಗಳನ್ನು ನೋಂದಾಯಿತ ರೈತ ಗುಂಪುಗಳಿಗೆ ಹಾಗೂ ಎಲ್ಲಾ ತರಹದ ಉಪಕರಣಗಳನ್ನು ಬಾಡಿಗೆ ಆಧಾರಿತ ಸೇವಾ ಕೇಂದ್ರಗಳಿಗೆ ಒದಗಿಸಲಾಗುತ್ತಿದೆ. ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡ ರೈತರಿಗೆ ಸಣ್ಣ ಟ್ರಾಕ್ಟರ್‌ಗಳಿಗೆ ರೂ.2.00 ಲಕ್ಷ ಸಹಾಯಧನ ಹಾಗೂ ಉಳಿದ ಕೃಷಿ ಉಪಕರಣಗಳಿಗೆ ಮತ್ತು ಕೃಷಿ ಸಂಸ್ಕರಣೆ ಘಟಕಗಳು ಹಾಗೂ ಟಾರ್ಪಾಲಿನ್‌ಗಳನ್ನು ಶೇ.90 ರಷ್ಟು ಸಹಾಯಧನವನ್ನು ಗರಿಷ್ಠ ಮಿತಿ ರೂ.1.00 ಲಕ್ಷದವರೆಗೆ ನೀಡಲಾಗುತ್ತಿದೆ.

**ಋ. ಕೃಷಿ ಯಂತ್ರಧಾರೆ :** ರಾಜ್ಯದಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಸಕಾಲದಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ಕಡಿಮೆ ಬಾಡಿಗೆ ದರದಲ್ಲಿ ಭೂಮಿ ಸಿದ್ಧತೆಯಿಂದ ಕೊಯ್ಲು ಮತ್ತು ಸಂಸ್ಕರಣೆಗೆ ಉಪಯುಕ್ತವಾಗುವ ವಿವಿಧ ಕೃಷಿ ಯಂತ್ರೋಪಕರಣಗಳನ್ನು ರೈತರಿಗೆ ಬಾಡಿಗೆ ಆಧಾರದ ಮೇಲೆ ಉಪಯೋಗಿಸಲು ಅವಕಾಶ ಕಲ್ಪಿಸಲಾಗಿದೆ.

**ಎ. ವಿಶೇಷ ಅಭಿವೃದ್ಧಿ ಯೋಜನೆ :** ಕರ್ನಾಟಕ ಸರ್ಕಾರವು ಡಾಃ ಡಿ.ಎಂ.ನಂಜುಂಡಪ್ಪರವರ ಅಧ್ಯಕ್ಷತೆಯಲ್ಲಿ ಪ್ರಾದೇಶಿಕ ಅಸಮತೋಲನ ನಿರ್ವಹಣಾ ಉನ್ನತ ಸಮಿತಿಯು 114 ಹಿಂದುಳಿದ ತಾಲ್ಲೂಕುಗಳನ್ನು ಗುರುತಿಸಿ ವರದಿ ನೀಡಿದೆ. ಅದರಲ್ಲಿ 39 ತಾಲ್ಲೂಕುಗಳು ಅತ್ಯಂತ ಹಿಂದುಳಿದಿದ್ದು 40 ತಾಲ್ಲೂಕುಗಳು ಅತಿ ಹಿಂದುಳಿದಿದ್ದು ಹಾಗೂ 35 ತಾಲ್ಲೂಕುಗಳು ಹಿಂದುಳಿದಿವೆ. ಈ ಹಿಂದುಳಿದ ತಾಲ್ಲೂಕುಗಳಿಗೆ ವಿಶೇಷ ಅಭಿವೃದ್ಧಿ ಅನುದಾನವನ್ನು ಒದಗಿಸಲಾಗಿರುತ್ತದೆ.

**ಐ. *ಖಾಸಗಿ ಸಹಭಾಗಿತ್ವದಲ್ಲಿ ಕಬ್ಬು ಕಟಾವು ಯಂತ್ರಗಳ ವಿತರಣೆ :*** ಕಬ್ಬು ಬೆಳೆ ಲಾಭದಾಯಕತೆ ಮತ್ತು ಹೆಚ್ಚುತ್ತಿರುವ ಕೂಲಿ ವೆಚ್ಚ ಕೂಲಿಕಾರ್ಮಿಕರ ಕೊರತೆಯನ್ನು ನಿವಾರಿಸಲು ಕಬ್ಬು ಕಟಾವು ಯಂತ್ರಗಳ ಬಳಕೆಗೆ ಸರ್ಕಾರ ಆದ್ಯತೆ ನೀಡಿ, ಇದಕ್ಕಾಗಿ ನೆರವಿನೊಂದಿಗೆ ಖಾಸಗಿ ಸಹಭಾಗಿತಿದಲ್ಲಿ ಕಬ್ಬು ಕಟಾವು ಯಂತ್ರಗಳಿಗೆ ಸಹಾಯಧನ ನೀಡಲಾಗುತ್ತಿದೆ.

**4. ಸಾವಯವ ಕೃಷಿ: ಸಾವಯವ ಗುಂಪು ಪ್ರಮಾಣೀಕರಣ:**

ಸಾವಯವ ಭಾಗ್ಯ ಯೋಜನೆಯನ್ನು ರಾಜ್ಯದ 566 ಹೋಬಳಿಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದ್ದು, 53829 ರೈತರುಗಳನ್ನೊಳಗೊಂಡ 63677 ಹೆ. ಪ್ರದೇಶವನ್ನು ಸಾವಯವ ಕೃಷಿ ಪದ್ದತಿಗೆ ಕರ್ನಾಟಕ ರಾಜ್ಯ ಸಾವಯವ ಪ್ರಮಾಣನ ಸಂಸ್ಥೆ (ಏಖಔಅಂ) ಯ ಮುಖಾಂತರ ಸಾವಯವ ಗುಂಪು ಪ್ರಮಾಣೀಕರಣಕ್ಕೆ ಒಳಪಡಿಸಲಾಗಿದೆ.

ಮುಂದುವರೆದು, ರಾಜ್ಯದ ಸಾವಯವ ಉತ್ಪನ್ನಗಳಗೆ ವ್ಯವಸ್ಥಿತ ಮಾರುಕಟ್ಟೆಯನ್ನು ಒದಗಿಸಲು ರಾಜ್ಯದ ಸಾವಯವ ಕೃಷಿಕರ ಸಂಘಗಳನ್ನು ಒಗ್ಗೂಡಿಸಿ ರಾಜ್ಯಾದ್ಯಂತ 14 ಪ್ರಾಂತೀಯ ಸಾವಯವ ಕೃಷಿಕರ ಸಂಘಗಳ ಒಕ್ಕೂಟವನ್ನು ರಚಿಸಲಾಗಿದ್ದು, ಒಕ್ಕೂಟಗಳ ಮುಖಾಂತರ ಸಾವಯವ ಕೃಷಿ ಉತ್ಪನ್ನಗಳ ಸಂಗ್ರಹಣೆ, ಗ್ರೇಡಿಂಗ್, ಮೌಲ್ಯವರ್ಧನೆ, ಸಂಸ್ಕರಣೆ, ಪ್ಯಾಕಿಂಗ್, ಬ್ರಾಂಡ್ ಅಭಿವೃದ್ಧಿ, ಮಾರುಕಟ್ಟೆ, ಬಳಕೆದಾರರಲ್ಲಿ ಅರಿವು ಮೂಡಿಸುವ ಕಾರ್ಯಕ್ರಮ ಈ ಮುಂತಾದ ಚಟುವಟಿಕೆಗಳನ್ನು ಕೈಗೊಳ್ಳಲಾಗುತ್ತಿದೆ.

**I.ಮಾರುಕಟ್ಟೆ ಆಧಾರಿತ ನಿರ್ದಿಷ್ಟ ಸಾವಯವ ಬೆಳೆ ಕ್ಲಸ್ಟರ್‌ಗಳ ಅಭಿವೃದ್ಧಿ ಕಾರ್ಯಕ್ರಮ:**
ರಾಜ್ಯದ ಸಾವಯವ ಕೃಷಿ ಉತ್ತೇಜನ ಕಾರ್ಯಕ್ರಮಗಳಡಿ ಸಾವಯವ ಕ್ಷೇತ್ರದಲ್ಲಿನ ಸಾಮರ್ಥ್ಯವುಳ್ಳ ಒಟ್ಟು 252 ಯೋಜನಾ ಪ್ರದೇಶಗಳಲ್ಲಿ (potential region) ಮಾರುಕಟ್ಟೆಗೆ ಒತ್ತು ನೀಡಿ ಉತ್ಪನ್ನ/ಬೆಳೆ ಯೋಜನೆಯನ್ನು ಕೈಗೊಂಡು ಗುಣಮಟ್ಟದ ಸಾವಯವ ಉತ್ಪನ್ನಗಳ ಸಮರ್ಪಕ ಹಾಗೂ ನಿರಂತರ ಪೂರೈಕೆಗಾಗಿ ಅವುಗಳ ಉತ್ಪಾದನೆ, ಸಂಗ್ರಹಣೆ, ವಿಂಗಡಣೆ, ಮೌಲ್ಯವರ್ಧನೆ, ಸಂಸ್ಕರಣೆ, ಪ್ಯಾಕಿಂಗ್, ಬ್ರ್ಯಾಂಡ್ ಅಭಿವೃದ್ಧಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗುತ್ತಿದೆ.

**II.ಸಾವಯವ ಕೃಷಿ ಮತ್ತು ದೃಢೀಕರಣ–** ರಾಜ್ಯದಲ್ಲಿ ಸಾವಯವ ಕೃಷಿ ಪ್ರಮಣೀಕೃತ ಪ್ರದೇಶವನ್ನು ಹೆಚ್ಚಿಸುವುದು ಹಾಗೂ ರಫ್ತು ಹಾಗು ದೇಶಿಯ ಮಾರುಕಟ್ಟೆಗಳಿಗೆ ಅಗತ್ಯವಿರುವ ಪ್ರಮಾಣ ಮತ್ತು ಉತ್ತಮ ಗುಣಮಟ್ಟದ ಸಾವಯವ ಉತ್ಪನ್ನಗಳನ್ನು ಉತ್ಪಾದಿಸಲು ರೈತ ಗುಂಪುಗಳ ಮೂಲಕ ಹೆಚ್ಚು ಪ್ರಮಾಣದ ಮತ್ತು ಗುಣಮಟ್ಟದ ಉತ್ಪಾದನೆಯನ್ನು ನಿರಂತರವಾಗಿ ಮಾರುಕಟ್ಟೆಗೆ ಹಾಗೂ ಗ್ರಾಹಕರಿಗೆ ಒದಗಿಸುವುದು ಈ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿರುತ್ತದೆ.

**III. ಶೂನ್ಯ ಬಂಡವಾಳ ನೈಸರ್ಗಿಕ ಕೃಷಿ ಪದ್ಧತಿ :** ಜನಾರೋಗ್ಯ ಮತ್ತು ಸಮಾಜದ ಸ್ವಸ್ಥ ಕಾಪಾಡುವ ನಿಟ್ಟಿನಲ್ಲಿ ಹಾಗೂ ರೈತರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದರೊಂದಿಗೆ ಬೇಸಾಯಕ್ಕೆ ಹೆಚ್ಚು ಹಣ ತೊಡಗಿಸದೆ ಸಾಂಪ್ರದಾಯಿಕ ಪದ್ಧತಿಯಲ್ಲಿ ಮಣ್ಣಿನ ಫಲವತ್ತೆಯನ್ನು ಹೆಚ್ಚಿಸಿ ಪೌಷ್ಟಿಕ ಹಾಗೂ ಗುಣಮಟ್ಟದ ಬೇಸಾಯದ ಮೂಲಕ ಬೆಳೆ ಬೆಳೆಯುವುದು ಈ ಕಾರ್ಯಕ್ರಮದ ಉದ್ದೇಶ. ರೈತರಿಗೆ ಕೃಷಿ ಲಾಭದಾಯಕವಾಗಿರಬೇಕು ಹಾಗೂ ಜನರಿಗೆ ಆರೋಗ್ಯಕರ ಆಹಾರ ದೊರೆಯ ನಿಟ್ಟಿನಲ್ಲಿ ಶೂನ್ಯ ಬಂಡವಾಳ ಸಹಜ ಕೃಷಿ (Zero Budget Natural Farming) ಪದ್ಧತಿ ರೈತರಿಗೆ ಉಪಯೋಗವಾಗುತ್ತದೆ.

**5. ಕೃಷಿ ವಿಸ್ತರಣೆ ಮತ್ತು ತರಬೇತಿ:**

**ಅ. ವಿಸ್ತರಣಾಧಿಕಾರಿಗಳ ಮತ್ತು ರೈತರ/ರೈತ ಮಹಿಳೆಯರ ತರಬೇತಿ ಕಾರ್ಯಕ್ರಮ :** ಈ ಯೋಜನೆಯಡಿ ರೈತರ/ರೈತ ಮಹಿಳೆಯರಲ್ಲಿನ ವೃತ್ತಿ ಸಾಮರ್ಥ್ಯವನ್ನು ಹೆಚ್ಚಿಸಲು ವಿಶೇಷ ತರಬೇತಿಗಳಯ, ರೈತ/ರೈತ ಮಹಿಳೆಯರಿಗಾಗಿ ರಾಜ್ಯ ಮಟ್ಟದ ಅಧ್ಯಯನ ಪ್ರವಾಸವನ್ನು ಏರ್ಪಡಿಸಲಾಗುತ್ತಿದೆ.

**ಆ. ಜಿಲ್ಲಾ ಕೃಷಿ ತರಬೇತಿ ಕೇಂದ್ರಗಳು –** ಜಿಲ್ಲಾ ಕೃಷಿ ತರಬೇತಿ ಕೇಂದ್ರಗಳಲ್ಲಿ ಬೋಧನ ಸಾಧನ ಸಾಮಗ್ರಿಗಳ ಖರೀದಿ, ಸೌರಶಕ್ತಿ ಉಪಕರಣ ನಿರ್ವಹಣೆ, ಮಳೆ ನೀರು ಕೊಯ್ಲು ನಿರ್ವಹಣೆ, ಪರಿಣಾಮಕಾರಿ ತರಬೇತಿಗೆ ಬೇಕಾದ ಪೂರಕ ಸಾಮಗ್ರಿಗಳ ಖರೀದಿ, ಸಣ್ಣ ಪುಟ್ಟ ರಿಪೇರಿ ಕೆಲಸಗಳ ನಿರ್ವಹಣೆ.

**ಇ. ಜಿಲ್ಲಾ ಕೃಷಿ ತರಬೇತಿ ಕೇಂದ್ರಗಳ ಉನ್ನತೀಕರಣ** – ಜಿಲ್ಲಾ ಕೃಷಿ ತರಬೇತಿ ಕೇಂದ್ರಗಳಲ್ಲಿ ನೂತನ ಕಟ್ಟಡ ನಿರ್ಮಾಣ, ಮೂಲಭೂತ ಸೌಕರ್ಯಗಳನ್ನು ಬಲಪಡಿಸಿ ತರಬೇತಿಗೆ ಬರುವ ಅಭ್ಯರ್ಥಿಗಳಿಗೆ ಉತ್ತಮ ವಾಸ್ತವ್ಯ, ಪರಿಣಾಮಕಾರಿ ತರಬೇತಿಗಳನ್ನು ಏರ್ಪಡಿಸುವ ನಿಟ್ಟಿನಲ್ಲಿ ತರಬೇತಿಗೆ ಬೇಕಾದ ಪೂರಕ ಸಾಮಗ್ರಿಗಳಾದ ಶ್ರವಣ-ದೃಶ್ಯ ಸಾಧನ ಇತ್ಯಾದಿಗಳನ್ನು ಒದಗಿಸಲಾಗುತ್ತಿದೆ.

**ಈ. ಕೃಷಿ ಮೇಳ ಮತ್ತು ವಸ್ತು ಪ್ರದರ್ಶನ** – ರೈತ ಸಮುದಾಯಕ್ಕೆ ಸುಧಾರಿತ ತಾಂತ್ರಿಕತೆಗಳನ್ನು ತಲುಪಿಸಲು ಸ್ಥಳೀಯ ಜಾತ್ರೆಗಳು ಮತ್ತು ವಿಶೇಷ ಸಂದರ್ಭಗಳಲ್ಲಿ ಇಲಾಖಾ ಚಟುವಟಿಕೆಗಳ ಕುರಿತು ಪರಿಣಾಮಕಾರಿಯಾಗಿ ಪ್ರಚುರಪಡಿಸಲು ವಸ್ತುಪ್ರದರ್ಶನ/ಕಾರ್ಯಾಗಾರ/ಮೇಳ / ಸಿಂಪೋಜಿಯಂಗಳನ್ನು ರಾಷ್ಟ್ರ, ಅಂತರರಾಜ್ಯ, ರಾಜ್ಯ, ಜಿಲ್ಲಾ, ತಾಲ್ಲೂಕು ಮಟ್ಟದಲ್ಲಿ ಮತ್ತು ಸ್ಥಳೀಯವಾಗಿ ಏರ್ಪಡಿಸಲಾಗುತ್ತಿದೆ.

**ಉ. ತಾಂತ್ರಿಕ ಉತ್ತೇಜಕರಿಗೆ ಗೌರವ ಧನ:** ಪ್ರಸ್ತಕ ಸಾಲಿನಲ್ಲಿ ಪ್ರಾತ್ಯಕ್ಷಿತೆ ಮತು ಇತರೆ ವಿಸ್ತರಣೆ ಕಾರ್ಯಕ್ರಮಗಳ ಬಗ್ಗೆ ರೈತರಲ್ಲಿ ಅರಿವು ಮೂಡಿಸಲು ,ತಾಂತ್ರಿಕ ಉತ್ತೇಜಕರ ಸೇವೆಯನ್ನು ಬಳಸಿಕೊಳ್ಳಲು, ಸದರಿ ರವರಿಗೆ ಗೌರವ ಧನ ನೀಡಲು ಅನುದಾನ ಬಳಕೆ.

**ಊ. ಭೂಸಮೃದ್ಧಿ:** 2018-19 ನೇ ಸಾಲಿಗೆ ರೈತರ ಆದಾಯದ ಹೆಚ್ಚಳ ಕುರಿತು ನಿಖರವಾದ ಮಾಹಿತಿಗಾಗಿ ಫಲಾನುಭವಿ ರೈತರ ಆರ್ಥಿಕಮಟ್ಟ ಹೆಚ್ಚಳಕ್ಕೆ ಸೂಕ್ತವಾದ ಕಾರ್ಯತಂತ್ರಗಳನ್ನು ಏಕಗವಾಕ್ಷಿ ಮಾದರಿಯಲ್ಲಿ ರೂಪಿಸಿ, ಕೃಷಿ ಅಲ್ಲದೇ ಕೃಷಿ ಸಂಬಂದಿತ ಚಟುವಟಿಕೆಗಳಾದ ತೋಟಗಾರಿಕೆ, ಪಶುಸಂಗೋಪನೆ, ಮೀನುಗಾರಿಕೆ, ಸಾಮಾಜಿಕ ಅರಣ್ಯ, ರೇಷ್ಮೆ, ಮುಂತಾದವುಗಳನ್ನು ಒಗ್ಗೂಡಿಸಿ **"ಸಮಗ್ರ ಕೃಷಿ ಪದ್ದತಿ ಮೂಲಕ ರೈತನ ಆದಾಯ ಹೆಚ್ಚಳ** ಮಾಡುವುದು ಈ ಕಾರ್ಯಕ್ರಮದ ಮುಖ್ಯ ಗುರಿಯಾಗಿದೆ.

**ಋ. ಕೃಷಿ ಅಭಿಯಾನ (ಕೃಷಿ ಉತ್ಸವ):** "ಇಲಾಖೆಗಳ ನಡಿಗೆ ರೈತರ ಮನೆ ಬಾಗಿಲಿಗೆ"- ಈ ಕಾರ್ಯಕ್ರಮದಡಿ ಹೋಬಳಿ ಮಟ್ಟದಲ್ಲಿ ಕೃಷಿ ಮತ್ತು ಸಂಬಂಧಿತ ಇಲಾಖೆಗಳಾದ ತೋಟಗಾರಿಕೆ, ರೇಷ್ಮೆ, ಅರಣ್ಯ, ಪಶುಸಂಗೋಪನೆ, ಜಲಾನಯನ, ಮೀನುಗಾರಿಕೆ ಮತ್ತು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗಳ ಸಹಯೋಗದೊಂದಿಗೆ ಸಮಗ್ರ ಕೃಷಿ ಮಾಹಿತಿ ಹಾಗೂ ಎಲ್ಲಾ ಇಲಾಖೆಗಳಿಂದ ಅನುಷ್ಠಾನಗೊಳಿಸುತ್ತಿರುವ ವಿವಿಧ ಯೋಜನೆಗಳ ಮಾಹಿತಿಯನ್ನು ಏಕ ಗವಾಕ್ಷಿ ವಿಸ್ತರಣಾ ಪದ್ಧತಿಯಲ್ಲಿ ಪ್ರಚಾರಪಡಿಸಲಾಗುತ್ತಿದೆ.

**ಎ.ಪ್ರಗತಿಪರ ರೈತರ ಆವಿಷ್ಕಾರಗಳನ್ನು ಇತರೆ ರೈತರಿಗೆ ಪ್ರಗತಿಪರ ರೈತರ ಮೂಲಕವೇ ತಲುಪಿಸಲಾಗುವುದು:** ರಾಜ್ಯದಲ್ಲಿ ಪ್ರಗತಿಪರ ರೈತರು ತಮ್ಮ ಕ್ಷೇತ್ರದಲ್ಲಿ ಆಧುನಿಕ ತಂತ್ರಜ್ಞಾನ ಅಳವಡಿಸಿ ಮಾಡಿರುವ ಆವಿಷ್ಕಾರಗಳನ್ನು ಇತರೆ ರೈತರಿಗೆ ತಲುಪಿಸಿ, ಕೃಷಿಯನ್ನು ಲಾಭದಾಯಕವನ್ನಾಗಿ ಮಾಡುವುದು ಈ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿರುತ್ತದೆ.

**6. ಕರ್ನಾಟಕ ರೈತ ಸುರಕ್ಷಾ ಪ್ರಧಾನ ಮಂತ್ರಿ ಫಸಲ್ ಬಿಮಾ ಯೋಜನೆ (ಹೊಸ ಬೆಳೆ ವಿಮಾ ಯೋಜನೆ)**

ಪ್ರಧಾನ ಮಂತ್ರಿ ಫಸಲ್ ಬಿಮಾ ಯೋಜನೆಗಳಡಿ ಪ್ರಕೃತಿ ವಿಕೋಪಗಳು, ಕೀಟಗಳು ಮತ್ತು ರೋಗಗಳಿಂದಾಗಿ ಯಾವುದೇ ಅಧಿಸೂಚಿತ ಬೆಳೆ ವಿಫಲವಾದ ಪಕ್ಷದಲ್ಲಿ ರೈತರಿಗೆ ವಿಮಾ ರಕ್ಷಣೆ ಮತ್ತು ಹಣಕಾಸು ಬೆಂಬಲ ಒದಗಿಸಲಾಗುತ್ತಿದೆ. ರೈತರಿಗೆ ನೀಡುವ ವಿಮಾ ಕಂತಿನ ರಿಯಾಯತಿಯಲ್ಲಿ ರಾಜ್ಯ ಸರ್ಕಾರದ ಪಾಲನ್ನು ನೀಡಿ ಬೆಳೆ ವಿಮಾ ನಷ್ಟ ಪರಿಹಾರವನ್ನು ಇತ್ಯರ್ಥಪಡಿಸಲು ಅನುವು ಮಾಡಿಕೊಳ್ಳಲಾಗುತ್ತಿದೆ.

**7. ಇಸ್ರೇಲ್ ಮಾದರಿ ಕೃಷಿ ತಾಂತ್ರಿಕತೆ ಗುಚ್ಛಗಳ ಅಭಿವೃದ್ಧಿ:** ಇಸ್ರೇಲ್ ದೇಶದ ಅತ್ಯಾಧುನಿಕ ತಂತ್ರಜ್ಞಾನಗಳನ್ನು ಬಳಸಿ ಖುಷ್ಕಿ ರೈತರಿಗಾಗಿ **"ಕೃಷಿ ತಾಂತ್ರಿಕತೆ ಗುಚ್ಛಗಳ ಅಭಿವೃದ್ಧಿ"** ಪಡಿಸಲು ನೀರಾವರಿ ವ್ಯವಸ್ಥೆಯಿಂದ ರೈತರ ಬೆಳೆಗಳನ್ನು ಕಾಪಾಡಲು, ಕೋಲಾರ, ಚಿತ್ರದುರ್ಗ, ಕೊಪ್ಪಳ ಮತ್ತು ಗದಗ ಜಿಲ್ಲೆಗಳಲ್ಲಿ ಮೊದಲ ಹಂತದಲ್ಲಿ ತಲಾ 5000 ಹೆಕ್ಟೇರ್ ಖುಷ್ಕಿ ಜಮೀನಿನಲ್ಲಿ ನೀರಾವರಿ ಸೌಲಭ್ಯ ಒದಗಿಸಲು ಕಾರ್ಯಕ್ರಮ ಅನುಷ್ಠಾನ.

**8. ಕೃಷಿ ಎಂಜಿನಿಯರಿಂಗ್:**

**ಅ.** ಬೃಹತ್ ಎಣ್ಣೆ ತಯಾರಿಕಾ ಕಂಪನಿಗಳಿಗೆ ಪರ್ಯಾಯವಾಗಿ ರೈತರಿಗೆ ಸಣ್ಣ ಸಣ್ಣ ಯಂತ್ರಚಾಲಿತ ಎಣ್ಣೆ ಗಾಣಗಳನ್ನು ನೀಡಿ ಪರಿಶುದ್ಧ ಹಾಗೂ ಆರೋಗ್ಯಪೂರ್ಣ ಎಣ್ಣೆ ಉತ್ಪಾದನೆ ಮಾಡಲು ಪ್ರೋತ್ಸಾಹ ನೀಡಲು ಈ ಕಾರ್ಯಕ್ರಮವನ್ನು ರೂಪಿಸಲಾಗಿದೆ.

**ಆ.** ಕರ್ನಾಟಕದ ಮಾಹಿತಿ ತಂತ್ರಜ್ಞಾನ ಇಲಾಖೆಯ ನೆರವು ಪಡೆದು ಹಲವು ನವೋದ್ಯಮಗಳು ಹೊಸ ಆವಿಷ್ಕಾರಗಳನ್ನು ಮಾಡಿತ್ತಿದ್ದು, ಡ್ರೋಣ್‌ಗಳನ್ನು ಉಪಯೋಗಿಸಿ ಬೆಳೆ ಪರಿಸ್ಥಿತಿಯನ್ನು ತಿಳಿದುಕೊಳ್ಳುವುದು; ನೀರಾವರಿಯಲ್ಲಿ ಸೆನ್ಸರ್ (sensor) ಉಪಯೋಗಿಸಿ ನೀರಿನ ಅವಶ್ಯಕತೆ ತಿಳಿಯುವುದು; ರೋಬೋಟ್‌ಗಳನ್ನು ಉಪಯೋಗಿಸಿ ಹೊಲಗಳಲ್ಲಿ ಹತ್ತಿಯನ್ನು ಹೆಕ್ಕುವುದು ಮುಂತಾದ ಆವಿಷ್ಕಾರಗಳನ್ನು ಉತ್ತಮಪಡಿಸಿ ರೈತರ ಹೊಲಗಳಲ್ಲಿ ಅಳವಡಿಸುವ ಕಾರ್ಯಕ್ರಮಕ್ಕಾಗಿ **ಕೃಷಿ ನವೋದ್ಯಮ** ಕಾರ್ಯಕ್ರಮವನ್ನು ರೂಪಿಸಲಾಗಿದೆ.

**ಇ.** ಧಾರವಾಡ ಕೃಷಿ ವಿಶ್ವವಿದ್ಯಾನಿಲಯಕ್ಕೆ ಮೆಣಸಿನಕಾಯಿ, ಕಾಳುಮೆಣಸು, ಗೋಡಂಬಿ, ಜೀರಿಗೆ, ಕೊತ್ತಂಬರಿ, ಮೆಂತ್ಯೆ ಬೆಳೆಗಳನ್ನು ದೀರ್ಘಕಾಲ ದಾಸ್ತಾನು ಮಾಡಲು ನಿರ್ವಾತ ತಂತ್ರಜ್ಞಾನವನ್ನು (Vaccum Technology) ಅಭಿವೃದ್ಧಿ ಪಡಿಸಲು ಹಾಗೂ ಈ ತಂತ್ರಜ್ಞಾನವನ್ನು ರೈತರ ಹಂತದಲ್ಲಿ ಪ್ರಚುರಪಡಿಸಲು ಅನುದಾನ.

**ಕೇಂದ್ರ ಪುರಸ್ಕೃತ ಯೋಜನೆಗಳು**

1. **ರಾಷ್ಟ್ರೀಯ ಆಹಾರ ಸುರಕ್ಷತೆ ಮಿಷನ್** : ರಾಜ್ಯದಲ್ಲಿ ಬತ್ತ ಮತ್ತು ದ್ವಿದಳ ಧಾನ್ಯಗಳ ಉತ್ಪಾದನೆಯನ್ನು ಹೆಚ್ಚಿಸುವುದರ ಜೊತೆಗೆ ಒರಟು ಧಾನ್ಯಗಳು ಮತ್ತು ವಾಣಿಜ್ಯ ಬೆಳೆಗಳ ಉತ್ಪಾದನೆಯನ್ನು ಸಹ ಹೆಚ್ಚಿಸಲು ಉದ್ದೇಶಿಸಿದ್ದು, ರಾಷ್ಟ್ರೀಯ ಆಹಾರ ಭದ್ರತಾ ಅಭಿಯಾನದಡಿ ಎನ್.ಎಫ್.ಎಸ್.ಎಂ–ಅಕ್ಕಿ ಮತ್ತು ಎನ್.ಎಫ್.ಎಸ್.ಎಂ–ದ್ವಿದಳಧಾನ್ಯ, ಎನ್.ಎಫ್.ಎಸ್.ಎಮ್–ಒರಟುಧಾನ್ಯಗಳು, ಎನ್.ಎಫ್.ಎಸ್.ಎಮ್–ವಾಣಿಜ್ಯ ಬೆಳೆಗಳು(ಹತ್ತಿ ಮತ್ತು ಕಬ್ಬು) ಯೋಜನೆಗಳನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ.

**ಅ.ಸುಧಾರಿತ ತಾಂತ್ರಿಕತೆ ಅಳವಡಿಸಿದ ರೈತರ ಖಾತೆಗೆ ನೇರ ಪ್ರೋತ್ಸಾಹಧನ:** ರಾಜ್ಯದ ಕೃಷಿಕರಲ್ಲಿ ಪ್ರಾತ್ಯಕ್ಷಿಕೆಗಳ ಮೂಲಕ ನೀರಿನ ಮಿತ ಬಳಕೆ, ಬೆಳೆ ಉತ್ಪಾದಕತೆ ಹೆಚ್ಚಳ, ಪೌಷ್ಟಿಕಾಂಶ ಭದ್ರತೆ ಹಾಗೂ ಆದಾಯ ಸುಸ್ಥಿರಗೊಳಿಸುವ ನಿಟ್ಟಿನಲ್ಲಿ ರೈತರಿಗೆ ನೇರವಾಗಿ ಪ್ರೋತ್ಸಾಹಧನ ವರ್ಗಾಯಿಸಲು ಹಾಗೂ ಇದೇ ಕಾರ್ಯಕ್ರಮದಲ್ಲಿ ತೊಡಗಿಸಿ ಕೊಂಡಿರುವ ತಾಂತ್ರಿಕ ಪ್ರೇರಕರಿಗೂ ಕೂಡ ಪ್ರೋತ್ಸಾಹಧನವನ್ನು ನೀಡಲಾಗುತ್ತಿದೆ.

**ಆ.ಸಿರಿಧಾನ್ಯಗಳ ಪ್ಯಾಕೇಜ್ :** ಪೌಷ್ಟಿಕಯುಕ್ತ ಆಹಾರ ಭದ್ರತೆ ಸಾಧಿಸಲು, ಆರೋಗ್ಯಯುತ ಆಹಾರಕ್ಕಾಗಿ, ಬರಗಾಲ ಎದುರಿಸುವಂತಹ ಮತ್ತು ಅಶಕ್ತ ಕೃಷಿಕರನ್ನು ರಕ್ಷಿಸುವ ಸಲುವಾಗಿ ಹೆಚ್ಚಿನ ವಿಸ್ತೀರ್ಣದಲ್ಲಿ ಸಿರಿಧಾನ್ಯಗಳನ್ನು ಬೆಳೆಸಬೇಕಿರುತ್ತದೆ. ದೀರ್ಘಕಾಲದಿಂದ ಇಳಿಮುಖವಾಗಿ ಸಾಗಿದ್ದ ಸಿರಿಧಾನ್ಯಗಳ ಬೇಸಾಯವನ್ನು ಸುಧಾರಿಸಿ ಮತ್ತು ವಿಸ್ತೀರ್ಣವನ್ನು 0.42 ಲಕ್ಷ ಹೆ. ರಿಂದ 0.60ಲಕ್ಷ ಹೆ. ಹೆಚ್ಚಿಸಲಾಗುತ್ತಿದೆ.

ಇ. **ನೇರ ಭತ್ತದ ಬಿತ್ತನೆ ಪದ್ಧತಿಗೆ ಪ್ರೋತ್ಸಾಹ:** ಅಚ್ಚುಕಟ್ಟು ಪ್ರದೇಶಗಳಲ್ಲಿ ಕಡಿಮೆ ನೀರು ಬಳಸಿ ಭತ್ತದ ಬೆಳೆಯನ್ನು ಬೆಳೆಯಲು ನೇರ ಭತ್ತದ ಬಿತ್ತನೆ ಪದ್ಧತಿಯನ್ನು ಮಿಷನ್ ಮೋಡ್ (Mission Mode) ರೂಪದಲ್ಲಿ 2.00 ಲಕ್ಷ ಹೆ. ಪ್ರದೇಶದಲ್ಲಿ ಅಳವಡಿಸಲಾಗುತ್ತಿದೆ.

**2. ಎನ್.ಎಮ್.ಎಸ್.ಎ.-ಮುಖ್ಯಮಂತ್ರಿಗಳ ಸೂಕ್ಷ್ಮ ನೀರಾವರಿ ಯೋಜನೆ**

ನೀರಿನ ಮಿತ ಬಳಕೆಯಿಂದ ಅಧಿಕ ಇಳುವರಿ ಪಡೆಯಲು ಹಾಗೂ ರಾಜ್ಯದಲ್ಲಿ ಲಘು ನೀರಾವರಿ ಪದ್ಧತಿಯನ್ನು ಜನಪ್ರಿಯಗೊಳಿಸಲು ಸೂಕ್ಷ್ಮ ನೀರಾವರಿ ಘಟಕಗಳನ್ನು ಕಡಿಮೆ ವೆಚ್ಚದಲ್ಲಿ ಎಲ್ಲಾ ವರ್ಗದ ರೈತರಿಗೆ ಅದರಲ್ಲೂ ಸಣ್ಣ ಮತ್ತು ಅತಿಸಣ್ಣ ರೈತರು ಶಕ್ತ ವೆಚ್ಚದಲ್ಲಿ ಪಡೆಯುವಂತೆ ಮಾಡಲು ಬಳಸಿಕೊಳ್ಳಲು ಮತ್ತು ಹೆಚ್ಚಿನ ಉತ್ಪಾದನೆ ಹಾಗೂ ಉತ್ಪಾದಕತೆಯನ್ನು ಗಳಿಸಲು ಮುಖ್ಯಮಂತ್ರಿಗಳ ಸೂಕ್ಷ್ಮ ನೀರಾವರಿ ಯೋಜನೆಯಡಿ ಹನಿ ನೀರಾವರಿ, ತುಂತುರು ನೀರಾವರಿ/ರೇನ್ ಗನ್ ಘಟಕಗಳ ಅಡಿಯಲ್ಲಿ ಭಾರತ ಸರ್ಕಾರ ನೀಡುವ ಆರ್ಥಿಕ ನೆರವಿಗೆ ಪೂರಕವಾಗಿ ರಾಜ್ಯ ಸರ್ಕಾರದ ಪಾಲಿನ ಆರ್ಥಿಕ ನೆರವನ್ನು ಭಾರತ ಸರ್ಕಾರದ ಮಾರ್ಗಸೂಚಿ ಮತ್ತು ಅನುಮೋದನೆ ಅನ್ವಯ ಶೇ.90ರ ರಿಯಾಯತಿ ಸೌಲಭ್ಯ ಒದಗಿಸಲಾಗುತ್ತಿದೆ.

**3. ಎನ್.ಎಮ್.ಎಸ್.ಎ.-ಇತರೆ ಘಟಕಗಳು**

ಅ. **ಮಳೆಯಾಶ್ರಿತ ಪ್ರದೇಶ ಅಭಿವೃದ್ಧಿ (RAD):** ನೈಸರ್ಗಿಕ ಸಂಪನ್ಮೂಲಗಳ ಸಂರಕ್ಷಣೆ, ಜೊತೆಗೆ ಮಳೆ ಆಧಾರಿತ ಕೃಷಿಯ ಅಭಿವೃದ್ದಿಯು ದೇಶದ ಆಹಾರ ಧಾನ್ಯಗಳ ಬೇಡಿಕೆಯನ್ನು ಪೂರೈಸಲು ಅತಿ ಮುಖ್ಯವಾಗಿರುತ್ತದೆ. ಈ ದಿಕ್ಕಿನಲ್ಲಿ ಪ್ರಮುಖವಾಗಿ ಮಳೆಯಾಶ್ರಿತ ಪ್ರದೇಶದಲ್ಲಿ ಕೃಷಿ ಉತ್ಪಾದಕತೆಯನ್ನು ಹೆಚ್ಚಿಸಲು ಮಳೆಯಾಶ್ರಿತ ಕ್ಷೇತ್ರದ ಅಭಿವೃದ್ಧಿ (RAD) ಕಾರ್ಯಕ್ರಮವನ್ನು ರಾಷ್ಟ್ರೀಯ ಸುಸ್ಥಿರ ಕೃಷಿ ಅಭಿಯಾನದಡಿಯಲ್ಲಿ (NMSA) ಅನುಷ್ಠಾನಗೊಳಿಸಲಾಗುತ್ತಿದೆ.

ಈ ಕಾರ್ಯಕ್ರದಡಿಯಲ್ಲಿ ರೈತರ ಕ್ಷೇತ್ರದಲ್ಲಿ ಏಕದಳ ಧಾನ್ಯ, ದ್ವಿದಳ ಧಾನ್ಯ ಮತ್ತು ಎಣ್ಣೆಕಾಳು ಆಧಾರಿತ ಬೆಳೆ ಪದ್ಧತಿಗಳ ಅನುಷ್ಠಾನ. ತೋಟಗಾರಿಕ ಆಧಾರಿತ, ಪಶುಸಂಗೋಪನಾ ಆಧಾರಿತ, ಕೃಷಿ ಅರಣ್ಯ ಆಧಾರಿತ ಬೆಳೆ ಪದ್ಧತಿಗಳ ಹಾಗೂ ಮಣ್ಣು ಮತ್ತು ನೀರು ಸಂರಕ್ಷಣಾ ಕ್ರಮಗಳು ಅನುಷ್ಠಾನ ಮಾಡಲಾಗುತ್ತಿದೆ.

ಆ. **ಮಣ್ಣು ಆರೋಗ್ಯ ನಿರ್ವಹಣೆ :** ಈ ಯೋಜನೆಯಡಿ ಹೊಸ ಸಂಚಾರಿ/ಸ್ಥಾನಿಕ ಮಣ್ಣು ಪರೀಕ್ಷಾ ಪ್ರಯೋಗಾಲಯಗಳ ಸ್ಥಾಪನೆ, ಮಣ್ಣು ಪರೀಕ್ಷಾ ಪ್ರಯೋಗಾಲಯಗಳ ಬಲವರ್ಧನೆ ಹಾಗೂ ಮಣ್ಣು ಆರೋಗ್ಯ ನಿರ್ವಹಣೆ/INM/ಸಮತೋಲನ ರಸಗೊಬ್ಬರ ಬಳಕೆ ಕುರಿತು ರೈತರಿಗೆ ಹಾಗೂ ವಿಸ್ತರಣಾ ಸಿಬ್ಬಂದಿಗಳಿಗೆ ತರಬೇತಿಗಾಗಿ ಅನುದಾನ ಬಳಕೆ ಮಾಡಲಾಗುತ್ತಿದೆ.

ಇ. **ಮಣ್ಣು ಆರೋಗ್ಯ ಚೀಟಿ ಕಾರ್ಯಕ್ರಮ** : ರಾಜ್ಯದ ಎಲ್ಲಾ ರೈತ ಹಿಡುವಳಿದಾರರಿಗೆ ಮಣ್ಣು ಪರೀಕ್ಷೆ ಮಾಡಿ ಮಣ್ಣು ಆರೋಗ್ಯ ಚೀಟಿ ವಿತರಿಸುವುದು ಹಾಗೂ ಪೋಷಕಾಂಶಗಳ ಕೊರತೆ ನೀಗಿಸಲು, ಮಣ್ಣು ಪರೀಕ್ಷೆ ಆಧಾರಿತ ರಸಗೊಬ್ಬರ ಶಿಫಾರಸ್ಸುಗಳನ್ನು ಮಾಡಲಾಗುತ್ತಿದೆ.

ಈ. **ಪರಂಪರಾಗತ ಕೃಷಿ ವಿಕಾಸ ಯೋಜನೆ (PKVY):** ಸಾವಯವ ಕೃಷಿಯಲ್ಲಿ ಪರಿಸರ ಸ್ನೇಹಿ ಉತ್ಪಾದನಾ ಪದ್ಧತಿಗಳಿಂದ ಮತ್ತು ಕಡಿಮೆ ವೆಚ್ಚದ ತಾಂತ್ರಿಕತೆ ಬಳಕೆ ಮಾಡಿಕೊಂಡು ಮಣ್ಣಿನ ಫಲವತ್ತತೆ ಕಾಪಾಡುವುದರೊಂದಿಗೆ ರಾಸಾಯನಿಕ ಉಳಿಕೆ ರಹಿತ, ಗುಣಮಟ್ಟದ ಸುರಕ್ಷಿತ ಆಹಾರದ ಉತ್ಪಾದನೆ ಮಾಡುವ ನಿಟ್ಟಿನಲ್ಲಿ PKVY ಯೋಜನೆಯಡಿಯೂ ಕ್ಲಸ್ಟರ್ (ಗುಚ್ಛ) ಮಾದರಿಯಲ್ಲಿ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು, ಸಹಭಾಗಿತ್ವ ಖಾತರಿ ವ್ಯವಸ್ಥೆ (PGS) ಪ್ರಮಾಣೀಕರಣ ಪದ್ಧತಿ ಅನುಸರಿಸಿ ಸಾವಯವ ಕೃಷಿಯನ್ನು ಪ್ರೋತ್ಸಾಹಿಸಲಾಗುತ್ತಿದೆ.

**4.ರಾಷ್ಟ್ರೀಯ ಎಣ್ಣೆಕಾಳು ಮತ್ತು ತಾಳೆ ಬೆಳೆ ಅಭಿಯಾನ(NMOOP)**

ಎಣ್ಣೆಕಾಳು ಬೆಳೆಗಳ ವಿಸ್ತೀರ್ಣ,ಉತ್ಪಾದನೆ ಹೆಚ್ಚಿಸುವುದು ಹಾಗೂ ಕ್ಷೇತ್ರ ಮಟ್ಟದಲ್ಲಿ ಮಣ್ಣಿನ ಫಲವತ್ತತೆ ಹಾಗೂ ಉತ್ಪಾದಕತೆಯನ್ನು ಸ್ಥಿರಗೊಳಿಸುವುದು ಮುಖ್ಯ ಉದ್ದೇಶ. ಎಣ್ಣೆ ಕಾಳು ಉತ್ಪಾದನಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲು ತಳಿವರ್ಧಕ ಬೀಜ ಖರೀದಿ, ಪ್ರಮಾಣಿತ ಬೀಜ ವಿತರಣೆ, ದೊಡ್ಡ ಪ್ರಮಾಣದ ಪ್ರಾತ್ಯಕ್ಷಿಕೆ, ಎಫ್.ಎಫ್.ಎಸ್ ಪ್ರಾತ್ಯಕ್ಷಿಕೆ, ರೈತರಿಗೆ ತರಬೇತಿ, ವಿಸ್ತರಣಾ ಅಧಿಕಾರಿಗಳಿಗೆ ತರಬೇತಿ, ಜಿಪ್ಸಂ/ಪೈರೇಟ್ಸ್ ಸರಬರಾಜು, ಸಸ್ಯ ಸಂರಕ್ಷಣಾ ಔಷಧಿ ವಿತರಣೆ, ರೈಜೋಬಿಯಂ/ಪಿ.ಎಸ್.ಬಿ ವಿತರಣೆ, ಕಳೆನಾಶಕಗಳ ವಿತರಣೆ, ಲಘು ಪೋಷಕಾಂಶಗಳ ವಿತರಣೆ, ಕೃಷಿ ಉಪಕರಣಗಳ ವಿತರಣೆ, ನೀರು ಒದಗಿಸುವ ಪೈಪುಗಳು, ಎನ್.ಪಿ.ವಿ ವಿತರಣೆ ಮಾಡಲಾಗುತ್ತಿದೆ.

**5. ರಾಷ್ಟ್ರೀಯ ಕೃಷಿ ವಿಸ್ತರಣೆ ಮತ್ತು ತಂತ್ರಜ್ಞಾನ ಅಭಿಯಾನ (NMAET)**

**ಅ) ಕೃಷಿ ವಿಸ್ತರಣೆ ಉಪ ಅಭಿಯಾನ:** "ವಿಸ್ತರಣಾ ಸುಧಾರಣೆಗಳಿಗಾಗಿ ರಾಜ್ಯ ವಿಸ್ತರಣಾ ಕಾರ್ಯಕ್ರಮಗಳಿಗೆ ಬೆಂಬಲ" ಯೋಜನೆಯು ವಿಸ್ತರಣಾ ಪದ್ಧತಿಯನ್ನು ರೈತರೇ ಮುನ್ನಡೆಸುವ ಹಾಗೂ ರೈತರಿಗೆ ಉತ್ತರದಾಯಿತ್ವವಾಗಬೇಕಾದ ಯೋಜನೆಯಾಗುವ ಗುರಿಯನ್ನು ಹೊಂದಿದೆ. ಇದಕ್ಕಾಗಿ ಭಾಗವಹಿಸುವಿಕೆ ಆಧಾರದ ಮೇಲೆ ವಿಸ್ತರಣಾ ಸುಧಾರಣೆಗಳನ್ನು ಜಾರಿಗೆ ತರಲು ಮತ್ತು ರೈತರಿಗೆ ತಂತ್ರಜ್ಞಾನವನ್ನು ಹೊಸ ಸಾಂಸ್ಥಿಕ ವ್ಯವಸ್ಥೆಯ ಮೂಲಕ ಪ್ರಸರಿಸುವ ಉದ್ದೇಶದಿಂದ ಜಿಲ್ಲಾ ಮಟ್ಟದಲ್ಲಿ ಕೃಷಿ ತಂತ್ರಜ್ಞಾನ ನಿರ್ವಹಣಾ ಸಂಸ್ಥೆ (ಆತ್ಮ)ಯನ್ನು ಅಸ್ಥಿತ್ವಕ್ಕೆ ತರಲಾಗಿದೆ.
ಈ ಯೋಜನೆಯಡಿಲ್ಲಿ ಅಧಿಕಾರಿ/ರೈತರ ತರಬೇತಿ, ಅಧಿಕಾರಿ/ರೈತರ ಪರಿಚಯ ಪ್ರವಾಸ, ಪ್ರಾತ್ಯಕ್ಷಿಕೆ, ರೈತರ ಗುಂಪು ರಚನೆ, ಕೃಷಿ ಪಾಠಶಾಲೆ, ಕೃಷಿ ಮೇಳ, ಕ್ಷೇತ್ರೋತ್ಸವ ಇತ್ಯಾದಿ ಕಾರ್ಯಕ್ರಮಗಳ ಅನುಷ್ಠಾನ ಮಾಡಲಾಗುತ್ತಿದೆ.

**ಆ) ಕೃಷಿ ಯಾಂತ್ರೀಕರಣ ಉಪ ಅಭಿಯಾನ:** ಕೃಷಿ ಯಾಂತ್ರೀಕರಣ ಉಪ ಅಭಿಯಾನ ಯೋಜನೆಯನ್ನು ಕೃಷಿ ಯಂತ್ರೋಪಕರಣಗಳ ಬಳಕೆಯಿಂದ ಸಾಗುವಳಿ ವಿಸ್ತೀರ್ಣದಲ್ಲಿ ಯಾಂತ್ರೀಕೃತ ಶಕ್ತಿಯನ್ನು ಹೆಕ್ಟೇರ್ ಗೆ 2.0KW ಗಳಷ್ಟು ಹೆಚ್ಚಿಸಲು ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗುತ್ತಿದೆ.

ಇ) ಬಿತ್ತನೆ ಬೀಜ ಮತ್ತು ಬಿತ್ತನೆ ಸಾಮಗ್ರಿ ಉಪ ಅಭಿಯಾನ - ಸರ್ಕಾರಿ ಸ್ವಾಮ್ಯದ ಸಂಸ್ಥೆಗಳ ಮೂಲಕ ರಾಜ್ಯ ಬೀಜೋತ್ಪಾದನಾ ಕ್ಷೇತ್ರಗಳ ಬಲವರ್ಧನೆ, ಬೀಜ ಪರೀಕ್ಷಾ ಪ್ರಯೋಗಾಲಯಗಳ ಬಲವರ್ಧನೆ, ಬೀಜ ಪ್ರಮಾಣನ ಸಂಸ್ಥೆಗಳಿಗೆ ಬೆಂಬಲ, ಬೀಜೋಪಚಾರ ಇತ್ಯಾದಿ.

**6. ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ (RKVY)**

ಈ ಯೋಜನೆಯಡಿ ಕೃಷಿ ಮತ್ತು ಸಂಬಂಧಿತ ವಲಯಗಳಲ್ಲಿ ಹೆಚ್ಚಿನ ಸಾರ್ವಜನಿಕ ಹೂಡಿಕೆಗಾಗಿ ರಾಜ್ಯಗಳಿಗೆ ಪ್ರೋತ್ಸಾಹಿಸುವುದು, ಜಿಲ್ಲಾ ಕೃಷಿ ಯೋಜನೆಗಳಲ್ಲಿ ಸ್ಥಳೀಯ ಆದ್ಯತೆಗಳು/ ಅವಶ್ಯಕತೆಗಳು/ಬೆಳೆಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡುವುದು, ಹೊಸ ತಾಂತ್ರಿಕತೆಗಳನ್ನು ಅಳವಡಿಸಿ ಮುಖ್ಯ ಬೆಳೆಗಳ ಉತ್ಪಾದಕತೆಯಲ್ಲಿ ಇರುವ ವ್ಯತ್ಯಯದ ಪ್ರಮಾಣವನ್ನು ಕಡಿತಗೊಳಿಸುವುದು, ಕೃಷಿ ಮತ್ತು ಸಂಬಂಧಿತ ವಲಯದ ಎಲ್ಲಾ ಅವಶ್ಯಕತೆಗಳನ್ನು ಗಣನೆಗೆ ತೆಗೆದುಕೊಂಡು ಉತ್ಪಾದನೆ/ಉತ್ಪಾದಕತೆಯ ವಿವಿಧ ಘಟಕಗಳಲ್ಲಿ ಗಣನೀಯ ಬದಲಾವಣೆ ತರುವುದು ಹಾಗೂ ಕೃಷಿ ಮತ್ತು ಸಂಬಂಧಿತ ವಲಯಗಳಿಂದ ರೈತರಿಗೆ ಹೆಚ್ಚಿನ ಲಾಭಾಂಶವನ್ನು ದೊರಕಿಸಲಾಗುತ್ತಿದೆ.

7. **ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಸಮಗ್ರ ಕೃಷಿ ಅಭಿವೃದ್ಧಿ (PPP-IAD):**

ಕೃಷಿ ಚಟುವಟಿಕೆಗಳನ್ನು ಹೆಚ್ಚಿಸುವ ದಿಶೆಯಲ್ಲಿ ಪ್ರೋತ್ಸಾಹಕ ಯೋಜನೆಗಳಲ್ಲಿ ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಸಮಗ್ರ ಕೃಷಿ ಅಭಿವೃದ್ಧಿ (PPP-IAD)ಯೋಜನೆಯು ಒಂದಾಗಿರುತ್ತದೆ. ಕೃಷಿ ಮತ್ತು ಕೃಷಿ ಸಂಬಂಧಿತ ವಲಯಗಳಲ್ಲಿ ರೈತರನ್ನು ಒಗ್ಗೂಡಿಸಿ, ಅತ್ಯವಶ್ಯಕ ಗ್ರಾಮೀಣ ಮೂಲಭೂತ ಸೌಕರ್ಯಗಳ ಸೃಜನೆ, ಹೊಸ ತಾಂತ್ರಿಕತೆಗಳ ಪರಿಚಯಿಸುವಿಕೆ, ಮೌಲ್ಯವರ್ಧನೆ ಮತ್ತು ಕೃಷಿಯಲ್ಲಿ ಸರಬರಾಜು ಸರಪಳಿಯನ್ನು ಕಲ್ಪಿಸಲು ಖಾಸಗಿ ವಲಯದಲ್ಲಿ ಬೃಹತ್ ಪ್ರಮಾಣದ ಪ್ರಾಯೋಜನೆಗಳನ್ನು ಪ್ರೋತ್ಸಾಹಿಸಲು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಸಮಗ್ರ ಕೃಷಿ ಅಭಿವೃದ್ಧಿ (PPP-IAD) ಯೋಜನೆಯ ಮುಖ್ಯ ಉದ್ದೇಶವಾಗಿರುತ್ತದೆ.

ಈ ಯೋಜನೆಯು ಬಿತ್ತನೆಯಿಂದ ಹಿಡಿದು ಒಕ್ಕಣೆ ಹಾಗೂ ಸಂಸ್ಕರಣೆವರೆಗೆ ಕಾರ್ಪೊರೇಟ್/ಖಾಸಗಿ ಸಂಸ್ಥೆಗಳ ಸಹಾಯ ಪಡೆದು ಉತ್ಪಾದನೆಯನ್ನು ಹೆಚ್ಚಿಸುವ ಗುರಿ ಹೊಂದುವುದರ ಜೊತೆಗೆ, ರೈತರ ಗುಂಪುಗಳನ್ನು ಎಂದರೆ ರೈತರ ಹಿತಾಸಕ್ತಿ ಗುಂಪು (FIG), ರೈತರ ಉತ್ಪಾದಕರ ಸಂಸ್ಥೆ ಸ್ಥಾಪಿಸಲಾಗುವುದು. ರೈತರ ಸಾಮರ್ಥ್ಯವನ್ನು ಬಲಗೊಳಿಸಿ ಅವರನ್ನು ಸಜ್ಜುಗೊಳಿಸುವುದರಿಂದ ಒಕ್ಕಣೆಯ ನಂತರದ ಸಂಸ್ಕರಣೆಗೆ ಮತ್ತು ಉತ್ಪನ್ನಗಳ ಮೌಲ್ಯವರ್ಧನೆಗೆ ಬೇಕಾದ ಮೂಲಭೂತ ಸೌಲಭ್ಯಗಳನ್ನು ಸ್ಥಾಪಿಸುವುದರ ಮೂಲಕ ಒಕ್ಕಣೆಯ ನಂತರದ ನಷ್ಟವನ್ನು ಕಡಿಮೆಗೊಳಿಸುವುದರಲ್ಲಿ ಮುಖ್ಯ ಪಾತ್ರವನ್ನು ನಿರ್ವಹಿಸಲಾಗುವುದು.

ಸರ್ಕಾರದಿಂದ ಅನುಷ್ಠಾನಗೊಳಿಸಲಾಗುತ್ತಿರುವ ವಿವಿಧ ಯೋಜನೆಗಳಡಿ ಲಭ್ಯವಿರುವ ಮೂಲಭೂತ ಸೌಕರ್ಯ ನಿರ್ಮಿಸಲು ರಿಯಾಯಿತಿಗಳನ್ನು ಹಾಗೂ ಖಚಿತವಾದ ರೈತ ಉತ್ಪನ್ನಗಳ ಪೂರೈಕೆಗಳನ್ನು ಕಾರ್ಪೊರೇಟ್/ಖಾಸಗಿ ಸಂಸ್ಥೆಗಳ ಸದರಿ ಯೋಜನೆಯಡಿ ಭಾಗವಹಿಸುವುದರಿಂದ ಪಡೆಯಬಹುದಾಗಿದೆ.

## ಅನುಬಂಧ-2

**LAQ 1098**

**ಯುವಕರು ಕೃಷಿ ಚಟುವಟಿಕೆಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ತೊಡಗಿಸಿಕೊಳ್ಳುವ ಮತ್ತು ಲಾಭದಾಯಕ ಕೃಷಿ ವ್ಯವಸ್ಥೆಯನ್ನು ಜನಪ್ರಿಯಗೊಳಿಸುವ ಸಲುವಾಗಿ ಇಲಾಖೆಯ ನೂತನ ಕಾರ್ಯಕ್ರಮಗಳ ವಿವರ:**

1. ಕೃಷಿ ಯಾಂತ್ರೀಕರಣ ಮತ್ತು ಕೃಷಿ ಸಂಸ್ಕರಣೆ: ಈ ಯೋಜನೆಯಡಿ ರೈತರಿಗೆ ಸಣ್ಣ ಟ್ರಾಕ್ಟರ್, ಪವರ್ ಟಿಲ್ಲರ್, ಭೂಮಿ ಸಿದ್ಧತೆ ಉಪಕರಣಗಳು, ನಾಟಿ/ಬಿತ್ತನೆ ಉಪಕರಣಗಳು, ಕುಯ್ಲು ಮತ್ತು ಒಕ್ಕಣೆ ಉಪಕರಣಗಳು, ಡೀಸೆಲ್ ಪಂಪು ಸೆಟ್ಟು, ಅಂತರ ಬೇಸಾಯ ಉಪಕರಣಗಳು ಹಾಗೂ ಸಸ್ಯ ಸಂರಕ್ಷಣಾ ಉಪಕರಣಗಳನ್ನು ಕೃಷಿ ಸಂಸ್ಕರಣೆ ಘಟಕಗಳು ಹಾಗೂ ಟಾರ್ಪಾಲಿನ್ ಸಯಾಯಧನದಡಿ ವಿತರಿಸಲಾಗುತ್ತಿದೆ.

2. ಕೃಷಿ ಯಂತ್ರಧಾರೆ : ರಾಜ್ಯದಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಸಕಾಲದಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ಕಡಿಮೆ ಬಾಡಿಗೆ ದರದಲ್ಲಿ ಭೂಮಿ ಸಿದ್ಧತೆಯಿಂದ ಕೊಯ್ಲು ಮತ್ತು ಸಂಸ್ಕರಣೆಗೆ ಉಪಯುಕ್ತವಾಗುವ ವಿವಿಧ ಕೃಷಿ ಯಂತ್ರೋಪಕರಣಗಳನ್ನು ಬಾಡಿಗೆ ಆಧಾರದ ಮೇಲೆ ಉಪಯೋಗಿಸಲು ಯುವ ರೈತ ಸಮೂಹಕ್ಕೆ ಅವಕಾಶ ಕಲ್ಪಿಸಲಾಗಿದೆ.

3. ತಾಲ್ಲೂಕು ಮತ್ತು ಜಿಲ್ಲಾ ಕೃಷಿ ತರಬೇತಿ ಕೇಂದ್ರಗಳಲ್ಲಿ ಆಸಕ್ತ ಯುವ ಸಮೂಹಕ್ಕೆ ತರಬೇತಿ, ಪ್ರಾತ್ಯಾಕ್ಷಿಕೆ, ಕೃಷಿ ಮೇಳ, ಕೃಷಿ ಕ್ಷೇತ್ರಾಧ್ಯಯನ ಹಾಗೂ ವಿನೂತನ ಮಾದರಿಯ ಕೃಷಿ ಕೈಗೊಳ್ಳಲು ಇಲಾಖೆ ವತಿಯಿಂದ ಅವಕಾಶ ಕಲ್ಪಿಸಲಾಗಿದೆ.

ಕರ್ನಾಟಕ ಸರ್ಕಾರ

ಸಂಖ್ಯೆ:ಸಕಇ 354 SLP 2018

ಕರ್ನಾಟಕ ಸರ್ಕಾರದ ಸಚಿವಾಲಯ
ಸುವರ್ಣಸೌಧ.
ಬೆಳಗಾವಿ. ದಿನಾಂಕ: 14-12-2018

14/12/18

ಇವರಿಂದ:
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು.
ಸಮಾಜ ಕಲ್ಯಾಣ ಇಲಾಖೆ.
ಬೆಳಗಾವಿ.

ಇವರಿಗೆ:
ಕಾರ್ಯದರ್ಶಿ.
ಕರ್ನಾಟಕ ವಿಧಾನ ಸಭೆ/~~ಪರಿಷತ್ತು~~.
ಸುವರ್ಣಸೌಧ.
ಬೆಳಗಾವಿ.

ಮಾನ್ಯರೇ.

ವಿಷಯ:- ಮಾನ್ಯ ವಿಧಾನ ಸಭೆ/~~ಪರಿಷತ್~~ ಸದಸ್ಯರಾದ ಶ್ರೀ/~~ಶ್ರೀಮತಿ~~ [illegible] ಇವರ ಚುಕ್ಕೆ ~~ಗುರುತಿನ/~~ಗುರುತಿಲ್ಲದ ಪ್ರಶ್ನೆ ಸಂಖ್ಯೆ: 64 /~~ನಿಯಮ-73/ /ಗ.ಸೆ.ಸೂ-351~~ಕ್ಕೆ ಉತ್ತರಿಸುವ ಬಗ್ಗೆ

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ. ಮಾನ್ಯ ವಿಧಾನ ಸಭೆ/~~ಪರಿಷತ್~~ ಸದಸ್ಯರಾದ ಶ್ರೀ/~~ಶ್ರೀಮತಿ~~ [illegible] ಇವರ ಚುಕ್ಕೆ ~~ಗುರುತಿನ~~/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 64 ~~/ನಿಯಮ-73/ /ಗ.ಸೆ.ಸೂ-351~~ಕ್ಕೆ ಸಂಬಂಧಿಸಿದ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ. ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಪಿ.ಎಸ್.ನಾಗರಾಜ್)
ಶಾಖಾಧಿಕಾರಿ.
ಸಮಾಜ ಕಲ್ಯಾಣ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 64
ಸದಸ್ಯರ ಹೆಸರು : ಶ್ರೀ. ಗೂಳಿಹಟ್ಟಿ ಡಿ. ಶೇಖರ್
ಉತ್ತರಿಸುವ ದಿನಾಂಕ : 14.12.2018
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ದಿನಾಂಕ: 01.06.2018 ರಿಂದ ನವೆಂಬರ್ 30ರ ವರೆಗೆ ಸಮಾಜ ಕಲ್ಯಾಣ ಇಲಾಖೆಗೆ ಮಂಜೂರಾದ ಮೊತ್ತ ಎಷ್ಟು; ಇದುವರೆವಿಗೂ ಬಿಡುಗಡೆಯಾದ (ಆರ್ಥಿಕ ಇಲಾಖೆಯಿಂದ) ಮೊತ್ತವೆಷ್ಟು; ಖರ್ಚಾದ ಮೊತ್ತವೆಷ್ಟು; ಯಾವ ಯಾವ ವಿಧಾನಸಭಾ ಕ್ಷೇತ್ರಗಳಿಗೆ ಎಷ್ಟೆಷ್ಟು ಹಣ ಬಿಡುಗಡೆಯಾಗಿದೆ: (ಮಾಹಿತಿ ನೀಡುವುದು) | 2018-19ನೇ ಸಾಲಿನಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಹಂಚಿಕೆ, ಬಿಡುಗಡೆ ಮತ್ತು ವೆಚ್ಚ ವಿವರಗಳು ಈ ಕೆಳಕಂಡಂತಿದೆ.<br>(ರೂ. ಕೋಟಿಗಳಲ್ಲಿ)<br>ಇಲಾಖೆ / ಹಂಚಿಕೆ / ಬಿಡುಗಡೆ / ವೆಚ್ಚ<br>ಪರಿಶಿಷ್ಟ ಜಾತಿ / 4875.54 / 3896.11 / 2296.05<br>ಪರಿಶಿಷ್ಟ ಪಂಗಡ / 1498.91 / 1071.86 / 785.45<br>ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗಗಳ ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯ ಒದಗಿಸಲು ರೂ.202.50 ಕೋಟಿಗಳನ್ನು ವಿಧಾನ ಸಭಾ ಕ್ಷೇತ್ರವಾರು ಹಂಚಿಕೆ ಮಾಡಿದ್ದು, ಅನುದಾನ ಬಿಡುಗಡೆ ಮಾಡಲು ಕ್ರಮವಹಿಸಲಾಗಿದೆ.<br>ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಆ) | ದಿನಾಂಕ: 01.06.2018 ರಿಂದ ನವೆಂಬರ್ 30ರ ವರೆಗೆ ಸಮಾಜ ಕಲ್ಯಾಣ ಇಲಾಖೆಯಿಂದ ಕೈಗೆತ್ತಿಕೊಂಡ ಕಾಮಗಾರಿಗಳೆಷ್ಟು; ನಿಗದಿಪಡಿಸಿದ ಅನುದಾನವೆಷ್ಟು; ಬಿಡುಗಡೆಯಾದ ಅನುದಾನವೆಷ್ಟು; ಖರ್ಚಾದ ಹಣವೆಷ್ಟು? (ವಿಧಾನಸಭಾ ಕ್ಷೇತ್ರವಾರು ಆಡಳಿತಾತ್ಮಕ ಅನುಮೋದನೆ ದಿನಾಂಕ. ಟೆಂಡರ್ ಕರೆದ ದಿನಾಂಕ. ಕಾಮಗಾರಿ ಪ್ರಾರಂಭಿಸಿದ ದಿನಾಂಕ. ಕಾಮಗಾರಿ ಪೂರ್ಣಗೊಂಡ ದಿನಾಂಕ. ಹಣ ಬಿಡುಗಡೆಯಾದ ದಿನಾಂಕಗಳ ಬಗ್ಗೆ ಸಂಪೂರ್ಣ ವಿವರ ನೀಡುವುದು: | ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗಗಳ ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯ ಒದಗಿಸಲು ಹಂಚಿಕೆ ಮಾಡಲಾದ ರೂ.202.50 ಕೋಟಿಗಳಲ್ಲಿ ಪ್ರಗತಿ ಕಾಲೋನಿ ಯೋಜನೆಯಡಿ ವಿಧಾನಸಭಾ ಕ್ಷೇತ್ರಗಳ ವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿಯ/ಪರಿಶಿಷ್ಟ ಪಂಗಡದ ಶೇ.50ಕ್ಕಿಂತ ಹೆಚ್ಚಿನ ಜನಸಂಖ್ಯೆಯಲ್ಲಿ ವಾಸಿಸುತ್ತಿರುವ ಕಾಲೋನಿಗಳನ್ನು ಅಭಿವೃದ್ಧಿ ಪಡಿಸಬೇಕಾಗಿದೆ.<br>ಒಂದು ವೇಳೆ ಯಾವುದೇ ವಿಧಾನ ಸಭಾ ಕ್ಷೇತ್ರದಲ್ಲಿ ಗುರುತಿಸಿದ ಪ್ರಗತಿ ಕಾಲೋನಿ ಇಲ್ಲದಿದ್ದಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಹೆಚ್ಚಿನ ಜನಸಂಖ್ಯೆ ಇರುವ ಕಾಲೋನಿಗಳನ್ನು ಆಯ್ಕೆ ಮಾಡಿಕೊಂಡು ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಕೆ.ಟಿ.ಪಿ.ಪಿ ಪ್ರಕಾರ ಟೆಂಡರ್ ಕರೆದು ಅನುಷ್ಠಾನಗೊಳಿಸಲು ಆದೇಶಿಸಲಾಗಿದೆ.<br>ಕಾಮಗಾರಿಗಳ ಆಯ್ಕೆ ಪ್ರಕ್ರಿಯೆ ಜಾರಿಯಲ್ಲಿದ್ದು, ಯಾವುದೇ ಕಾಮಗಾರಿಗಳು ಪ್ರಾರಂಭವಾಗಿರುವುದಿಲ್ಲ. |

ಸಕಇ 354 ಎಸ್ಎಲ್ಪಿ 2018

(ಪ್ರಿಯಾಂಕ್ ಖರ್ಗೆ)
ಸಮಾಜ ಕಲ್ಯಾಣ ಸಚಿವರು

## ಅನುಬಂಧ-1

(ರೂ.ಲಕ್ಷಗಳಲ್ಲಿ)

| ಕ್ರ.ಸಂ. | ವಿಧಾನಸಭಾ ಕ್ಷೇತ್ರಗಳ ಹೆಸರು | ಎಸ್.ಸಿ. | ಎಸ್.ಟಿ. | ಒಟ್ಟು |
|---|---|---|---|---|
| 1 | ಕುಡಚಿ (ಎಸ್.ಸಿ) | 100.00 | 50.00 | 150.00 |
| 2 | ರಾಯಬಾಗ್ (ಎಸ್.ಸಿ) | 100.00 | 50.00 | 150.00 |
| 3 | ಯಮಕನಮರಡಿ (ಎಸ್.ಟಿ) | 150.00 | 150.00 | 300.00 |
| 4 | ಮುಧೋಳ್ (ಎಸ್.ಸಿ) | 100.00 | 50.00 | 150.00 |
| 5 | ನಾಗಠಾಣ (ಎಸ್.ಸಿ) | 150.00 | 50.00 | 200.00 |
| 6 | ಸೋರಾಪುರ (ಎಸ್.ಟಿ.) | 50.00 | 100.00 | 150.00 |
| 7 | ಚಿತ್ತಾಪೂರ (ಎಸ್.ಸಿ) | 250.00 | 50.00 | 300.00 |
| 8 | ಚಿಂಚೋಳಿ (ಎಸ್.ಸಿ) | 250.00 | 50.00 | 300.00 |
| 9 | ಕಲಬುರಗಿ ಗ್ರಾಮಾಂತರ (ಎಸ್.ಸಿ) | 100.00 | 50.00 | 150.00 |
| 10 | ಔರಾದ್ (ಎಸ್.ಸಿ) | 100.00 | 50.00 | 150.00 |
| 11 | ರಾಯಚೂರು ಗ್ರಾಮಾಂತರ (ಎಸ್.ಟಿ) | 150.00 | 150.00 | 300.00 |
| 12 | ಮಾನ್ವಿ (ಎಸ್.ಟಿ) | 50.00 | 150.00 | 200.00 |
| 13 | ದೇವದುರ್ಗ (ಎಸ್.ಟಿ) | 50.00 | 100.00 | 150.00 |
| 14 | ಲಿಂಗಸೂಗೂರು (ಎಸ್.ಸಿ) | 250.00 | 50.00 | 300.00 |
| 15 | ಮಸ್ಕಿ (ಎಸ್.ಟಿ) | 150.00 | 150.00 | 300.00 |
| 16 | ಕನಕಗಿರಿ (ಎಸ್.ಸಿ) | 100.00 | 50.00 | 150.00 |
| 17 | ಶಿರಹಟ್ಟಿ (ಎಸ್.ಸಿ) | 100.00 | 50.00 | 150.00 |
| 18 | ಹುಬ್ಬಳ್ಳಿ-ಧಾರವಾಡ ಪೂರ್ವ (ಎಸ್.ಸಿ) | 250.00 | 50.00 | 300.00 |
| 19 | ಹಾವೇರಿ (ಎಸ್.ಸಿ) | 100.00 | 50.00 | 150.00 |
| 20 | ಹಡಗಲಿ (ಎಸ್.ಸಿ) | 250.00 | 50.00 | 300.00 |
| 21 | ಹಗರಿಬೊಮ್ಮನಹಳ್ಳಿ (ಎಸ್.ಸಿ) | 250.00 | 50.00 | 300.00 |
| 22 | ಕಂಪ್ಲಿ (ಎಸ್.ಟಿ) | 150.00 | 150.00 | 300.00 |
| 23 | ಸಿರುಗುಪ್ಪ (ಎಸ್.ಟಿ) | 50.00 | 100.00 | 150.00 |
| 24 | ಬಳ್ಳಾರಿ (ಎಸ್.ಟಿ) | 150.00 | 150.00 | 300.00 |
| 25 | ಸಂಡೂರು (ಎಸ್.ಟಿ) | 150.00 | 150.00 | 300.00 |
| 26 | ಕೂಡ್ಲಿಗಿ (ಎಸ್.ಟಿ) | 50.00 | 100.00 | 150.00 |
| 27 | ಮೊಳಕಾಲ್ಮೂರು (ಎಸ್.ಟಿ) | 50.00 | 100.00 | 150.00 |
| 28 | ಚಳ್ಳಕೆರೆ (ಎಸ್.ಟಿ) | 150.00 | 150.00 | 300.00 |
| 29 | ಹೊಳಲ್ಕೆರೆ (ಎಸ್.ಸಿ) | 100.00 | 50.00 | 150.00 |
| 30 | ಜಗಳೂರು (ಎಸ್.ಟಿ) | 50.00 | 100.00 | 150.00 |
| 31 | ಮಾಯಕೊಂಡ (ಎಸ್.ಸಿ) | 100.00 | 50.00 | 150.00 |
| 32 | ಶಿವಮೊಗ್ಗ ಗ್ರಾಮಾಂತರ (ಎಸ್.ಸಿ) | 100.00 | 50.00 | 150.00 |
| 33 | ಮೂಡಿಗೆರೆ (ಎಸ್.ಸಿ) | 100.00 | 50.00 | 150.00 |
| 34 | ಕೊರಟಗೆರೆ (ಎಸ್.ಸಿ) | 250.00 | 50.00 | 300.00 |
| 35 | ಪಾವಗಡ (ಎಸ್.ಸಿ) | 250.00 | 50.00 | 300.00 |
| 36 | ಮುಳಬಾಗಿಲು (ಎಸ್.ಸಿ) | 100.00 | 50.00 | 150.00 |
| 37 | ಕೋಲಾರ ಗೋಲ್ಡ್ ಫೀಲ್ಡ್ (ಎಸ್.ಸಿ) | 250.00 | 50.00 | 300.00 |
| 38 | ಬಂಗಾರಪೇಟೆ (ಎಸ್.ಸಿ) | 250.00 | 50.00 | 300.00 |
| 39 | ಆನೇಕಲ್ (ಎಸ್.ಸಿ) | 250.00 | 50.00 | 300.00 |
| 40 | ದೇವನಹಳ್ಳಿ (ಎಸ್.ಸಿ) | 150.00 | 50.00 | 200.00 |
| 41 | ನೆಲಮಂಗಲ (ಎಸ್.ಸಿ) | 150.00 | 50.00 | 200.00 |

| | | | | |
|---|---|---|---|---|
| 42 | ಮಳವಳ್ಳಿ (ಎಸ್.ಸಿ) | 150.00 | 50.00 | 200.00 |
| 43 | ಸಕಲೇಶಪುರ (ಎಸ್.ಸಿ) | 150.00 | 50.00 | 200.00 |
| 44 | ಸುಳ್ಯ (ಎಸ್.ಸಿ) | 100.00 | 50.00 | 150.00 |
| 45 | ಹೆಗ್ಗಡದೇವನಕೋಟೆ (ಎಸ್.ಟಿ) | 150.00 | 150.00 | 300.00 |
| 46 | ನಂಜನಗೂಡು (ಎಸ್.ಸಿ) | 100.00 | 50.00 | 150.00 |
| 47 | ಟಿ.ನರಸೀಪುರ(ಎಸ್.ಸಿ) | 150.00 | 50.00 | 200.00 |
| 48 | ಕೊಳ್ಳೇಗಾಲ (ಎಸ್.ಸಿ) | 100.00 | 50.00 | 150.00 |
| 49 | ಚಿಕ್ಕೋಡಿ-ಸದಲಗಾ | 100.00 | 50.00 | 150.00 |
| 50 | ಅಥಣಿ | 100.00 | 50.00 | 150.00 |
| 51 | ಕಾಗವಾಡ | 100.00 | 50.00 | 150.00 |
| 52 | ಗೋಕಾಕ್ | 100.00 | 50.00 | 150.00 |
| 53 | ಬೆಳಗಾವಿ ಗ್ರಾಮಾಂತರ | 100.00 | 50.00 | 150.00 |
| 54 | ಖಾನಾಪುರ | 100.00 | 50.00 | 150.00 |
| 55 | ಬೈಲಹೊಂಗಲ | 100.00 | 50.00 | 150.00 |
| 56 | ಜಮಖಂಡಿ | 100.00 | 50.00 | 150.00 |
| 57 | ಬಾದಾಮಿ | 100.00 | 50.00 | 150.00 |
| 58 | ಬಸವನಬಾಗೇವಾಡಿ | 100.00 | 50.00 | 150.00 |
| 59 | ಬಬಲೇಶ್ವರ | 100.00 | 50.00 | 150.00 |
| 60 | ಇಂಡಿ | 100.00 | 50.00 | 150.00 |
| 61 | ಅಫ್ಜಲಪುರ | 100.00 | 50.00 | 150.00 |
| 62 | ಜೇವರ್ಗಿ | 100.00 | 50.00 | 150.00 |
| 63 | ಶಹಾಪುರ | 100.00 | 50.00 | 150.00 |
| 64 | ಗುರುಮಿಟ್‌ಕಲ್ | 75.00 | 25.00 | 100.00 |
| 65 | ಕಲಬುರಗಿ ಉತ್ತರ | 100.00 | 50.00 | 150.00 |
| 66 | ಬಸವಕಲ್ಯಾಣ | 100.00 | 50.00 | 150.00 |
| 67 | ಹುಮನಾಬಾದ್ | 100.00 | 50.00 | 150.00 |
| 68 | ಬೀದರ್ ದಕ್ಷಿಣ | 75.00 | 25.00 | 100.00 |
| 69 | ಬೀದರ್ | 100.00 | 50.00 | 150.00 |
| 70 | ಭಾಲ್ಕಿ | 100.00 | 50.00 | 150.00 |
| 71 | ಸಿಂಧನೂರು | 75.00 | 25.00 | 100.00 |
| 72 | ಕುಷ್ಟಗಿ | 100.00 | 50.00 | 150.00 |
| 73 | ಕೊಪ್ಪಳ | 100.00 | 50.00 | 150.00 |
| 74 | ಗದಗ | 100.00 | 50.00 | 150.00 |
| 75 | ಕುಂದಗೋಳ್ | 100.00 | 50.00 | 150.00 |
| 76 | ಹಳಿಯಾಳ | 100.00 | 50.00 | 150.00 |
| 77 | ಯಲ್ಲಾಪುರ | 100.00 | 50.00 | 150.00 |
| 78 | ಹಿರೇಕೆರೂರು | 100.00 | 50.00 | 150.00 |
| 79 | ವಿಜಯನಗರ | 100.00 | 50.00 | 150.00 |
| 80 | ಹರಿಹರ | 100.00 | 50.00 | 150.00 |
| 81 | ದಾವಣಗೆರೆ ದಕ್ಷಿಣ | 100.00 | 50.00 | 150.00 |
| 82 | ಭದ್ರಾವತಿ | 100.00 | 50.00 | 150.00 |
| 83 | ಶೃಂಗೇರಿ | 100.00 | 50.00 | 150.00 |
| 84 | ಕುಣಿಗಲ್ | 100.00 | 50.00 | 150.00 |
| 85 | ತುಮಕೂರು ಗ್ರಾಮಾಂತರ | 75.00 | 25.00 | 100.00 |

| | | | | |
|---|---|---|---|---|
| 86 | ಗುಬ್ಬಿ | 75.00 | 25.00 | 100.00 |
| 87 | ಶಿರಾ | 75.00 | 25.00 | 100.00 |
| 88 | ಮಧುಗಿರಿ | 75.00 | 25.00 | 100.00 |
| 89 | ಗೌರಿಬಿದನೂರು | 100.00 | 50.00 | 150.00 |
| 90 | ಬಾಗೇಪಲ್ಲಿ | 100.00 | 50.00 | 150.00 |
| 91 | ಚಿಕ್ಕಬಳ್ಳಾಪುರ | 100.00 | 50.00 | 150.00 |
| 92 | ಶಿಡ್ಲಘಟ್ಟ | 100.00 | 50.00 | 150.00 |
| 93 | ಚಿಂತಾಮಣಿ | 75.00 | 25.00 | 100.00 |
| 94 | ಶ್ರೀನಿವಾಸಪುರ | 100.00 | 50.00 | 150.00 |
| 95 | ಕೋಲಾರ | 75.00 | 25.00 | 100.00 |
| 96 | ಮಾಲೂರು | 100.00 | 50.00 | 150.00 |
| 97 | ಹೊಸಕೋಟೆ | 100.00 | 50.00 | 150.00 |
| 98 | ದೊಡ್ಡಬಳ್ಳಾಪುರ | 100.00 | 50.00 | 150.00 |
| 99 | ಮಾಗಡಿ | 75.00 | 25.00 | 100.00 |
| 100 | ರಾಮನಗರ | 75.00 | 25.00 | 100.00 |
| 101 | ಕನಕಪುರ | 100.00 | 50.00 | 150.00 |
| 102 | ಚನ್ನಪಟ್ಟಣ | 75.00 | 25.00 | 100.00 |
| 103 | ಮದ್ದೂರು | 75.00 | 25.00 | 100.00 |
| 104 | ಮೇಲುಕೋಟೆ | 75.00 | 25.00 | 100.00 |
| 105 | ಮಂಡ್ಯ | 75.00 | 25.00 | 100.00 |
| 106 | ಶ್ರೀರಂಗಪಟ್ಟಣ | 75.00 | 25.00 | 100.00 |
| 107 | ನಾಗಮಂಗಲ | 75.00 | 25.00 | 100.00 |
| 108 | ಕೃಷ್ಣರಾಜಪೇಟೆ | 75.00 | 25.00 | 100.00 |
| 109 | ಶ್ರವಣಬೆಳಗೊಳ | 75.00 | 25.00 | 100.00 |
| 110 | ಅರಸೀಕೆರೆ | 75.00 | 25.00 | 100.00 |
| 111 | ಬೇಲೂರು | 75.00 | 25.00 | 100.00 |
| 112 | ಹೊಳೇನರಸೀಪುರ | 75.00 | 25.00 | 100.00 |
| 113 | ಅರಕಲಗೂಡು | 75.00 | 25.00 | 100.00 |
| 114 | ಪಿರಿಯಾಪಟ್ಟಣ | 75.00 | 25.00 | 100.00 |
| 115 | ಕೃಷ್ಣರಾಜನಗರ | 75.00 | 25.00 | 100.00 |
| 116 | ಹುಣಸೂರು | 75.00 | 25.00 | 100.00 |
| 117 | ಚಾಮುಂಡೇಶ್ವರಿ | 75.00 | 25.00 | 100.00 |
| 118 | ನರಸಿಂಹರಾಜ | 100.00 | 50.00 | 150.00 |
| 119 | ವರುಣಾ | 100.00 | 50.00 | 150.00 |
| 120 | ಹನೂರು | 100.00 | 50.00 | 150.00 |
| 121 | ಚಾಮರಾಜನಗರ | 100.00 | 50.00 | 150.00 |
| 122 | ಸಿಂಧಗಿ | 75.00 | 25.00 | 100.00 |
| 123 | ಮಂಗಳೂರು | 100.00 | 50.00 | 150.00 |
| | ಒಟ್ಟು | 13600.00 | 6650.00 | 20250.00 |

ಕರ್ನಾಟಕ ಸರ್ಕಾರ

ಸಂಖ್ಯೆ:ಸಕಇ 558 SPC 2018

ಕರ್ನಾಟಕ ಸರ್ಕಾರದ ಸಚಿವಾಲಯ
ಸುವರ್ಣಸೌಧ,
ಬೆಳಗಾವಿ. ದಿನಾಂಕ: 14-12-2018

ಇವರಿಂದ:

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಸಮಾಜ ಕಲ್ಯಾಣ ಇಲಾಖೆ,
ಬೆಳಗಾವಿ.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ/~~ಪರಿಷತ್ತು~~
ಸುವರ್ಣಸೌಧ,
ಬೆಳಗಾವಿ.

52

14/12/18

ಮಾನ್ಯರೇ,

ವಿಷಯ:- ಮಾನ್ಯ ವಿಧಾನ ಸಭೆ/~~ಪರಿಷತ್~~ ಸದಸ್ಯರಾದ ಶ್ರೀ/~~ಶ್ರೀಮತಿ~~ D.C. ನಾಗೇಶ್ ........ ಇವರ ಚುಕ್ಕೆ ~~ಗುರುತಿನ~~/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 104 ~~/ನಿಯಮ-73/ /ಗ.ಸೆ.ಸೂ-351~~ಕ್ಕೆ ಉತ್ತರಿಸುವ ಬಗ್ಗೆ

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ/~~ಪರಿಷತ್~~ ಸದಸ್ಯರಾದ ಶ್ರೀ/~~ಶ್ರೀಮತಿ~~ D.C. ನಾಗೇಶ್ ........ ಇವರ ಚುಕ್ಕೆ ~~ಗುರುತಿನ~~/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 104 ~~/ನಿಯಮ-73/ /ಗ.ಸೆ.ಸೂ-351~~ಕ್ಕೆ ಸಂಬಂಧಿಸಿದ ಉತ್ತರದ 100...... ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಪಿ.ಎಸ್.ನಾಗರಾಜ್)
ಶಾಖಾಧಿಕಾರಿ,
ಸಮಾಜ ಕಲ್ಯಾಣ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 104
ಸದಸ್ಯರ ಹೆಸರು : ಶ್ರೀ ಡಿ.ಸಿ. ಗೌರೀಶಂಕರ್
ಉತ್ತರಿಸಬೇಕಾದ ದಿನಾಂಕ : 14.12.2018
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2015-16ನೇ ಸಾಲಿನಿಂದ ಇದುವರೆಗೂ ತುಮಕೂರು ಜಿಲ್ಲೆ, ತುಮಕೂರು ಗ್ರಾಮಾಂತರ ಕ್ಷೇತ್ರಕ್ಕೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮದ ವತಿಯಿಂದ ಗಂಗಾಕಲ್ಯಾಣ ಯೋಜನೆಯಡಿ ಮಂಜೂರಾದ ಕೊಳವೆ ಬಾವಿಗಳ ಸಂಖ್ಯೆ ಎಷ್ಟು; (ಈ ಯೋಜನೆಯಡಿ ಆಯ್ಕೆಯಾದ ಫಲಾನುಭವಿಗಳ ಸಂಪೂರ್ಣ ಮಾಹಿತಿ ನೀಡುವುದು) | ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರಕ್ಕೆ ಮಂಜೂರಾದ ಕೊಳವೆ ಬಾವಿಗಳ ಸಂಖ್ಯೆ ಮತ್ತು ಫಲಾನುಭವಿಗಳ ವಿವರಗಳನ್ನು ಅನುಬಂಧ-1 ಮತ್ತು 2 ರಲ್ಲಿ ನೀಡಲಾಗಿದೆ. |
| ಆ) | ಈ ಕ್ಷೇತ್ರದಲ್ಲಿ ಕೈಗೊಂಡ ಗಂಗಾಕಲ್ಯಾಣ ಯೋಜನೆಯಲ್ಲಿ ಅವ್ಯವಹಾರ ನಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ |
| ಇ) | ಹಾಗಿದ್ದಲ್ಲಿ, ಸಂಬಂಧಪಟ್ಟ ಅಧಿಕಾರಿಗಳ ಮೇಲೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ. |

ಸಂಖ್ಯೆ: ಸಕಇ 558 ಎಸ್‌ಡಿಸಿ 2018

(ಪ್ರಿಯಾಂಕ್ ಖರ್ಗೆ)
ಸಮಾಜ ಕಲ್ಯಾಣ ಸಚಿವರು

ಅನುಬಂಧ-1

| ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ | | | |
|---|---|---|---|
| ಶ್ರೀ ಗೌರಿಶಂಕರ್ (ತುಮಕೂರು ಗ್ರಾಮಾಂತರ) ವಿಧಾನಸಭಾಸಭೆಯ ಸದಸ್ಯರು ಇವರ ಪ್ರಶ್ನೆ ಸಂ. 104ಕ್ಕೆ ಉತ್ತರಕ್ಕೆ ಅನುಬಂಧ | | | |
| ತುಮಕೂರು ಗ್ರಾಮಾಂತರ ವಿಧಾನಸಬಾ ಕ್ಷೇತ್ರ | | | |
| ಕ್ರ.ಸಂ | ಫಲಾನುಭವಿ ಹೆಸರು | ಗ್ರಾಮ | ತಾಲ್ಲೂಕು |
| 2015-16 | | | |
| 1 | ಚಿಕ್ಕಣ್ಣ ಬಿನ್ ಈರಣ್ಣ | ಬೆಳ್ಳಾವಿ | ತುಮಕೂರು |
| 2 | ರಂಗಪ್ಪ ಬಿನ್ ಅಡವಿರಂಗಪ್ಪ | ಅಜ್ಜಗೊಂಡನಹಳ್ಳಿ | ತುಮಕೂರು |
| 3 | ರಂಗಧಾಮಯ್ಯ ಬಿನ್ ಲೇಟ್ ರಂಗಯ್ಯ | ಕೆಂಪೋಹಳ್ಳಿ | ತುಮಕೂರು |
| 4 | ಚಿಕ್ಕಣ್ಣ (ರಂಗಪ್ಪ) ಬಿನ್ ರಂಗಯ್ಯ | ಹೊಳಕಲ್ಲು | ತುಮಕೂರು |
| 5 | ಚಂದ್ರಪ್ಪ ಬಿನ್ ವಿಜಯನರಸಿಂಹಯ್ಯ | ನಾಗವಲ್ಲಿ | ತುಮಕೂರು |
| 6 | ಶಿವರಾಜಮ್ಮ ಕೋಂ ವೆಂಕಟಾಚಲಯ್ಯ | ಕೋಡಿಪಾಳ್ಯ | ತುಮಕೂರು |
| 7 | ಯಶೋದಮ್ಮ ಕೋಂ ವೆಂಕಟರಾಮಯ್ಯ | ಹೊನಸಿಗೆರೆ | ತುಮಕೂರು |
| 8 | ರಮೇಶ್ ಬಿನ್ ರಂಗಶ್ಯಾಮಯ್ಯ | ಮಲ್ಲಸಂದ್ರ | ತುಮಕೂರು |
| 9 | ರಾಮಕೃಷ್ಣಯ್ಯ ಬಿನ್ ಲೇ. ಭೀಮಯ್ಯ | ಕುಪ್ಪೂರು | ತುಮಕೂರು |
| 10 | ಗರುಡಪ್ಪ ಬಿನ್ ಭೀಮಯ್ಯ | ದೊಡ್ಡಸಾರಂಗಿಪಾಳ್ಯ | ತುಮಕೂರು |
| 11 | ಆಂಜಿನಪ್ಪ ಬಿನ್ ಸೀಬಿಗುಂಡಯ್ಯ | ಬಳ್ಳಾಪುರ | ತುಮಕೂರು |
| 12 | ಆರ್. ಮುದ್ದಯ್ಯ ಬಿನ್ ರಂಗಯ್ಯ | ಕುಪ್ಪೂರು | ತುಮಕೂರು |
| 13 | ಕುಮಾರ್ ಬಿನ್ ಭೀಮಯ್ಯ | ಗೂಳಹರಿವಿ | ತುಮಕೂರು |
| 14 | ಜಯಮ್ಮ ಕೋಂ ರಂಗಶ್ಯಾಮಯ್ಯ | ಗೌಡನಕಟ್ಟೆ | ತುಮಕೂರು |
| 15 | ರಂಗಧಾಮಯ್ಯ ಬಿನ್ ಚೆನ್ನಿಗಯ್ಯ | ಕುಂದೂರು | ತುಮಕೂರು |
| 16 | ರಾಮಚಂದ್ರಯ್ಯ ಬಿನ್ ಪುಟ್ಟಹನುಮಂತಯ್ಯ | ಹಾಲನೂರು | ತುಮಕೂರು |
| 17 | ನಾಗಮ್ಮ ಕೋಂ ಸಿದ್ದಯ್ಯ | ಮಲ್ಲೇನಹಳ್ಳಿ | ತುಮಕೂರು |
| 18 | ರಾಜಣ್ಣ ಬಿನ್ ಪುಟ್ಟಯ್ಯ | ಕುಪ್ಪೂರು | ತುಮಕೂರು |
| 19 | ಅಡವಪ್ಪ ಬಿನ್ ದೊಡ್ಡರಂಗಯ್ಯ, ಜಂಟಿ (ಮುದ್ದಯ್ಯ ಬಿನ್ ದೊಡ್ಡರಂಗಯ್ಯ) | ಕುಪ್ಪೂರು | ತುಮಕೂರು |
| 20 | ಬಸವಯ್ಯ ಬಿನ್ ಲೇ. ಶಿವಣ್ಣ, | ಮುಳುಕುಂಟೆ | ತುಮಕೂರು |
| 21 | ಮುನಿಯಪ್ಪ ಬಿನ್ ಲೇ. ರಂಗಯ್ಯ, | ಮುಳುಕುಂಟೆ | ತುಮಕೂರು |
| 22 | ಲಕ್ಕಯ್ಯ ಬಿನ್ ಚಿಕ್ಕರಾಮಯ್ಯ | ಪಿ.ಗೊಲ್ಲಹಳ್ಳಿ | ತುಮಕೂರು |
| 23 | ಗೋವಿಂದಪ್ಪ ಬಿನ್ ನಾರಾಯಣಪ್ಪ | ಕುಪ್ಪೂರು | ತುಮಕೂರು |
| 24 | ನರಸಿಂಹಮೂರ್ತಿ ಬಿನ್ ಮುನಿರಂಗಯ್ಯ, (ಅರಸಪ್ಪ ಬಿನ್ ಗವಿರಂಗಯ್ಯ ಬದಲಿಗೆ) | ಚೆನ್ನೇನಹಳ್ಳಿ | ತುಮಕೂರು |
| 25 | ಕೆಂಪರಂಗಯ್ಯ ಬಿನ್ ಕರೇರಂಗಯ್ಯ | ಮಲ್ಲಸಂದ್ರ | ತುಮಕೂರು |

2

| ಕ್ರ.ಸಂ | ಫಲಾನುಭವಿ ಹೆಸರು | ಗ್ರಾಮ | ತಾಲ್ಲೂಕು |
|---|---|---|---|
| 2016-17 | | | |
| 1 | ರಂಗಯ್ಯ ಬಿನ್ ಚಿಕ್ಕರಂಗಯ್ಯ | ಲಿಂಗನಹಳ್ಳಿ | ತುಮಕೂರು |
| 2 | ಲಕ್ಷ್ಮೀದೇವಮ್ಮ ಕೋಂ ಗಂಗಯ್ಯ | ದೊಡ್ಡವೀರನಹಳ್ಳಿ | ಬೆಳ್ಳಾವಿ |
| 3 | ಚಿನ್ನಯ್ಯ ಬಿನ್ ದೊಡ್ಡಯ್ಯ | ಚಿಕ್ಕನಾರವಂಗಲ | ಬೆಳ್ಳಾವಿ |
| 4 | ನಾಗರಾಜು ಬಿನ್ ಪೆನ್ನಯ್ಯ | ನೆಲಹಾಳ್ | ತುಮಕೂರು |
| 5 | ಲೋಕಮ್ಮ ಕೋಂ ನರಸಿಂಹಮೂರ್ತಿ | ಮುದಿಗೆರೆ | ಬೆಳ್ಳಾವಿ |
| 6 | ಲಕ್ಷ್ಮಮ್ಮ ಕೋಂ ಗಂಗಮಾರಯ್ಯ | ನಾಯಕರಪಾಳ್ಯ | ಊರ್ಡಿಗೆರೆ |
| 7 | ನಾಗರಾಜಯ್ಯ ಬಿನ್ ಸಿದ್ದಪ್ಪ | ಕದರನಹಳ್ಳಿ | ಕಸಬ |
| 8 | ಕೃಷ್ಣಕುಮಾರ್ ಬಿನ್ ಚಿಕ್ಕಣ್ಣನಾಯಕ | ಕೆಂಬಳಲು | ತುಮಕುರು |
| 9 | ರಂಗಪ್ಪ ಬಿನ್ ಪಾಪಣ್ಣ | ಚೆನ್ನೇನಹಳ್ಳಿ | ತುಮಕೂರು |
| 10 | ಜಯರಾಮಪ್ಪ ಬಿನ್ ಮಹಿಮಯ್ಯ | ಗಿರಿನಾಯಕನಪಾಳ್ಯ | ತುಮಕುರು |
| 11 | ಪುಟ್ಟಯ್ಯ ಬಿನ್ ದೊಡ್ಡಯ್ಯ | ಅಣ್ಣೇನಹಳ್ಳಿ | ತುಮಕೂರು |
| 12 | ರಂಗಸ್ವಾಮಯ್ಯ ಬಿನ್ ರಂಗಯ್ಯ | ಅರಿಯೂರು | ತುಮಕೂರು |
| 13 | ರಾಮಯ್ಯ ಬಿನ್ ಗರುಡರಂಗಯ್ಯ | ನಾಯಕರಪಾಳ್ಯ | ತುಮಕೂರು |
| 14 | ನಟರಾಜು ಬಿನ್ ಶೇಷಪ್ಪ | ಹೊಳಕಲ್ಲು | ತುಮಕುರು |
| 15 | ರಂಗಸ್ವಾಮಯ್ಯ ಬಿನ್ ರಂಗನಾಯಕ | ಸಾಸಲು | ತುಮಕುರು |
| 16 | ಸಿದ್ದಗಂಗಮ್ಮ ಕೋಂ ಹನುಮಂತರಾಯಪ್ಪ | ಜೋಲುಮಾರನಹಳ್ಳಿ | ತುಮಕುರು |
| 17 | ಮರಿದಿಮ್ಮಯ್ಯ ಬಿನ್ ಜವರಾನಾಯಕ | ಬೇಗೂರು | ತುಮಕುರು |
| 18 | ಸೋಮಸುಂದರ್ ಬಿನ್ ಲೇ. ರಂಗಯ್ಯ | ದೊಡ್ಡೇರಿ | ತುಮಕುರು |
| 19 | ಚಿಕ್ಕರಂಗಮ್ಮ ಕೋಂ ರಾಮಯ್ಯ | ಹೆಬ್ಬಾಕ | ಕಸಬ |
| 20 | ಅಶ್ವತ್ಥಯ್ಯ ಬಿನ್ ರಂಗಧಾಮಯ್ಯ | ಮುಳುಕುಂಟೆ | ತುಮಕುರು |
| 21 | ಕೃಷ್ಣಪ್ಪ ಬಿನ್ ಭೀಮಯ್ಯ | ಕುಪ್ಪೂರು | ತುಮಕೂರು |
| 22 | ವೀರಣ್ಣ ಬಿನ್ ಬೊಮ್ಮನಾಳಯ್ಯ | ಲಿಂಗನಹಳ್ಳಿ | ತುಮಕೂರು |
| 23 | ವೆಂಕಟೇಶ್ ಬಿನ್ ತಿಮ್ಮಯ್ಯ | ಹೊಸನಸಿಗೆರೆ | ತುಮಕೂರು |
| 24 | ಕುಮಾರ್ ಬಿನ್ ಪುಟ್ಟನಾಗಯ್ಯ | ಮಲ್ಲಸಂದ್ರ | ತುಮಕೂರು |
| 25 | ಜಯಮ್ಮ ಬಿನ್ ರಂಗಧಾಮಯ್ಯ | ಮಲ್ಲಸಂದ್ರ | ತುಮಕೂರು |
| 26 | ಶಾರದಮ್ಮ ಕೋಂ ಗಂಗಯ್ಯ | ಗೂಳೂರು | ತುಮಕೂರು |
| 27 | ಪ್ರೇಮಾ ಕೋಂ ರಂಗಸ್ವಾಮಯ್ಯ | ಮಲ್ಲಸಂದ್ರ | ತುಮಕೂರು |

| ಕ್ರ.ಸಂ | ಫಲಾನುಭವಿ ಹೆಸರು | ಗ್ರಾಮ | ತಾಲ್ಲೂಕು |
|---|---|---|---|
| 17-18 | | | |
| 1 | ಕೃಷ್ಣಮೂರ್ತಿ ಬಿನ್ ಚಿಕ್ಕರಂಗಯ್ಯ | ಮಸಣಪುರ | ತುಮಕೂರು |
| 2 | ಕರಿಯಣ್ಣ ಬಿನ್ ಚಿಕ್ಕಪಾತಯ್ಯ | ಕುರಿಕೆಂಪನಹಳ್ಳಿ | ತುಮಕೂರು |
| 3 | ಪುಟ್ಟೋಬಳಯ್ಯ ಬಿನ್ ಕೆಂಪೋಬಳಯ್ಯ | ಓಬಣ್ಣನಪಾಳ್ಯ | ತುಮಕೂರು |
| 4 | ಚಂದ್ರಯ್ಯ ಬಿನ್ ನರಸಿಂಹಯ್ಯ | ಬಳ್ಳಾಪುರ | ತುಮಕೂರು |
| 5 | ಪುಟ್ಟಮ್ಮ ಕೋಂ ರಂಗಣ್ಣ | ಮುದಿಗೆರೆ | ತುಮಕೂರು |
| 6 | ಲಿಂಗಯ್ಯ ಬಿನ್ ವೈಯಾಳಯ್ಯ | ಲಿಂಗನಹಳ್ಳಿ | ತುಮಕೂರು |
| 7 | ಹನುಮಕ್ಕ ಕೋಂ ರಂಗಧಾಮಯ್ಯ | ನಾಯಕರಪಾಳ್ಯ | ತುಮಕೂರು |
| 8 | ಕೃಷ್ಣಮೂರ್ತಿ ಬಿನ್ ಚೆನ್ನಿಗಯ್ಯ | ಪೆಮ್ಮನಹಳ್ಳಿ | ತುಮಕೂರು |
| 9 | ಯೋಗನರಸಿಂಹ ಬಿನ್ ನರಸಿಂಹಮೂರ್ತಿ | ಮಂಚಕಲ್‌ಕುಪ್ಪೆ | ತುಮಕೂರು |
| 10 | ಚಿಕ್ಕರಂಗಯ್ಯ ಬಿನ್ ಹನುಮಂತನಾಯಕ | ಯಲಾದಹಳ್ಳಿ | ತುಮಕೂರು |
| 11 | ಜಯರಾಮ ಬಿನ್ ಬೊಮ್ಮಲಿಂಗಯ್ಯ | ದೇವನಹಳ್ಳಿ | ತುಮಕೂರು |
| 12 | ಕರೇರಂಗಯ್ಯ ಬಿನ್ ಚಿಕ್ಕರಂಗಯ್ಯ | ಬೆಳಗುಂಬ | ತುಮಕೂರು |
| 13 | ಉಮೇಶ ಬಿನ್ ಮುದ್ದರಂಗಯ್ಯ | ಊರುಕೆರೆ | ತುಮಕೂರು |
| 14 | ಪುಟ್ಟಯ್ಯ ಬಿನ್ ರಂಗಯ್ಯ | ಊರುಕೆರೆ | ತುಮಕೂರು |
| 15 | ನರಸಮ್ಮ ಕೋಂ ಲಿಂಗಯ್ಯ | ಊರುಕೆರೆ | ತುಮಕುರು |
| 16 | ರಾಮಚಂದ್ರಯ್ಯ ಬಿನ್ ಲೇ. ರಂಗಯ್ಯ | ಹೊಳಕಲ್ಲು | ತುಮಕುರು |
| 17 | ವೆಂಕಟಲಕ್ಷ್ಮಮ್ಮ ಕೋಂ ಗಂಗರಾಮಯ್ಯ | ದೊಡ್ಡಸಾರಂಗಿಪಾಳ್ಯ | ತುಮಕೂರು |
| 18 | ಲಕ್ಷ್ಮಣ ಬಿನ್ ಹನುಮಂತಯ್ಯ | ಕುಪ್ಪೂರು | ತುಮಕೂರು |
| 19 | ಶಿವಣ್ಣ ಬಿನ್ ವೆಂಕಟನರಸಯ್ಯ | ಬಳ್ಳಾಪುರ | ತುಮಕುರು |
| 20 | ಬಸವರಾಜು ಬಿನ್ ತೋಪಿನರಂಗಯ್ಯ | ನೆಲಹಾಳ್ | ತುಮಕುರು |
| 21 | ರಂಗಮ್ಮ ಕೋಂ ಸಣ್ಣನಾಯಕ | ಗಿರಿನಾಯಕನಪಾಳ್ಯ | ತುಮಕುರು |
| 22 | ಕೆಂಪಣ್ಣ ಬಿನ್ ಸೀಬಿರಂಗಯ್ಯ | ಚೆನ್ನೇನಹಳ್ಳಿ | ತುಮಕುರು |
| 23 | ರಾಮಯ್ಯ ಬಿನ್ ಸಿ.ಬಿ.ಗುಂಡಯ್ಯ | ರಂಗನಾಯಕನಪಾಳ್ಯ | ತುಮಕೂರು |
| 24 | ಹನುಮಂತರಾಯಪ್ಪ ಬಿನ್ ಅಂಜನನಾಯಕ | ಮಾನಂಗಿ | ತುಮಕೂರು |
| 25 | ಮೂಡ್ಲಯ್ಯ ಬಿನ್ ಗೋವಿಂದಯ್ಯ | ಪೊಗಡಮಾರನಹಳ್ಳಿ | ತುಮಕೂರು |
| 26 | ಜಯರಾಮ ಬಿನ್ ಮೂಡ್ಲಯ್ಯ | ಹೊನಸಿಗೆರೆ | ತುಮಕೂರು |

ಅನುಬಂಧ - 2

ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ, ಬೆಂಗಳೂರು

4

**ವಿಧಾನ ಸಭೆಯ ಸದಸ್ಯರಾದ ಶ್ರೀ ಡಿ.ಸಿ ಗೌರೀಶಂಕರ್ (ವಿಧಾನ ಸಭಾ ಸದಸ್ಯರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 104 ಕ್ಕೆ ಉತ್ತರ**

ಅನುಬಂಧ - 1

| ಕ್ರ.ಸಂ | ವರ್ಷ | ಫಲಾನುಭವಿಗಳ ಹೆಸರು | ವಿಳಾಸ | ಜಾತಿ/ಉಪಜಾತಿ |
|---|---|---|---|---|
| 1 | 2015-16 | ಗಂಗಣ್ಣ ಬಿನ್ ಭೀಮಯ್ಯ | ಕೊತ್ತಿಹಳ್ಳಿ | ಆದಿ ದ್ರಾವಿಡ |
| 2 | 2015-16 | ದುರ್ಗನರಸಯ್ಯ ಬಿನ್ ಬ್ಯಾಟಯ್ಯ | ಮುದಿಗೆರೆ | ಆದಿ ಕರ್ನಾಟಕ |
| 3 | 2015-16 | ಬೆಟ್ಟಸ್ವಾಮಿ ಬಿನ್ ಹನುಮಂತಯ್ಯ | ಪುರದಕಟ್ಟೆಕಾವಲ್ | ಆದಿ ಕರ್ನಾಟಕ |
| 4 | 2015-16 | ಗೌರಮ್ಮ ಕೋಂ ಬೈಲಪ್ಪ | ಹೊನ್ನೇನಹಳ್ಳಿ | ಆದಿ ಕರ್ನಾಟಕ |
| 5 | 2015-16 | ದೊಡ್ಡಮ್ಮ ಕೋಂ ಲೇ॥ ಅಡವಯ್ಯ | ಬಾಣಾವರ | ಆದಿ ಕರ್ನಾಟಕ |
| 6 | 2015-16 | ಚಿಕ್ಕಮ್ಮ ಕೋಂ ನರಸೀಯಪ್ಪ, | ಮುದಿಗೆರೆ | ಆದಿ ಕರ್ನಾಟಕ |
| 7 | 2015-16 | ಯತೀರಾಜ್ ಬಿನ್ ಸಂಜೀವಯ್ಯ | ಅಸಲೀಪುರ | ಆದಿ ದ್ರಾವಿಡ |
| 8 | 2015-16 | ಮೀನಾಕ್ಷಮ್ಮ ಕೋಂ ಚನ್ನಯ್ಯ | ಮುದಿಗೆರೆ | ಆದಿ ಕರ್ನಾಟಕ |
| 9 | 2015-16 | ದೊಡ್ಡಮ್ಮ ಕೋಂ ದೊಡ್ಡಯ್ಯ | ಬೆಳ್ಳಾವಿ | ಆದಿ ಕರ್ನಾಟಕ |
| 10 | 2015-16 | ಉಡೇದಮ್ಮ ಕೋಂ ಲೇ॥ ಜೋಗಯ್ಯ | ಕುಂಕುಮನಹಳ್ಳಿ | ಆದಿ ದ್ರಾವಿಡ |
| 11 | 2015-16 | ರಂಗಮ್ಮ ಕೋಂ ವರಕೇರಯ್ಯ | ಲಿಂಗಿಕಟ್ಟೆ | ಆದಿ ಕರ್ನಾಟಕ |
| 12 | 2015-16 | ಗೋವಿಂದಪ್ಪ ಬಿನ್ ಮೂಡಲಗಿರಿಯಪ್ಪ | ಕುಡುವನಕುಂಟೆ | ಆದಿ ಕರ್ನಾಟಕ |
| 13 | 2015-16 | ಸೋಮಶೇಖರ್ ಬಿನ್ ಗಂಗಯ್ಯ | ಕರಡಿಗೆರೆ | ಆದಿ ಕರ್ನಾಟಕ |
| 14 | 2015-16 | ಕೆ.ಕೆಂಪಯ್ಯ ಬಿನ್ ಚಿಕ್ಕಣ್ಣ | ಲಿಂಗಿಕಟ್ಟೆ | ಆದಿ ಕರ್ನಾಟಕ |
| 15 | 2015-16 | ದೊಡ್ಡಯ್ಯ ಬಿನ್ ಚಿಕ್ಕದೊಡ್ಡಯ್ಯ | ಕರಡಿಗೆರೆ | ಆದಿ ಕರ್ನಾಟಕ |
| 16 | 2015-16 | ಚಿಕ್ಕನರಸಯ್ಯ ಬಿನ್ ಕೆಂಪಯ್ಯ | ಹೊನಸಿಗೆರೆ | ಆದಿ ಕರ್ನಾಟಕ |
| 17 | 2015-16 | ಜಯಮ್ಮ ಕೋಂ ವೀರನಾಗಯ್ಯ | ಬಳಗೆರೆಕಾವಲ್ | ಆದಿ ಕರ್ನಾಟಕ |
| 18 | 2015-16 | ನರಸಿಂಹಯ್ಯ ಬಿನ್ ಹುಚ್ಚಯ್ಯ | ಗುಲಗಂಜಿಹಳ್ಳಿ | ಆದಿ ಕರ್ನಾಟಕ |
| 19 | 2015-16 | ಪುಟ್ಟಹನುಮಂತಯ್ಯ ಬಿನ್ ಹನುಮಂತಯ್ಯ | ಯಾಲದಹಳ್ಳಿ | ಆದಿ ಕರ್ನಾಟಕ |
| 20 | 2015-16 | ಸಿದ್ದಯ್ಯ ಬಿನ್ ದೊಡ್ಡಬೋರಯ್ಯ, | ಹೊನ್ನೇನಹಳ್ಳಿ | ಆದಿ ಕರ್ನಾಟಕ |
| 21 | 2015-16 | ಗೋವಿಂದಯ್ಯ ಬಿನ್ ನರಸಿಂಹಯ್ಯ | ಲಿಂಗಿಕಟ್ಟೆ | ಆದಿ ದ್ರಾವಿಡ |
| 22 | 2015-16 | ರಾಮಯ್ಯ ಬಿನ್ ಕರಿಯಪ್ಪ | ಸೀತಕಲ್ಲು | ಆದಿ ಕರ್ನಾಟಕ |
| 23 | 2015-16 | ನಾಗಣ್ಣ ಬಿನ್ ತಿಮ್ಮಯ್ಯ | ಬೆಟ್ಟಸೀತಕಲ್ಲು | ಭೋವಿ |
| 24 | 2015-16 | ಚಿಕ್ಕಮ್ಮ ಕೋಂ ಕರಿಯಪ್ಪ | ಸೀತಕಲ್ಲು | ಆದಿ ಕರ್ನಾಟಕ |
| 25 | 2015-16 | ಮಂಜುಳ ಕೋಂ ನಂಜುಂಡಯ್ಯ | ಯಲ್ಲಾಪುರ | ಆದಿ ಕರ್ನಾಟಕ |
| 26 | 2015-16 | ರಾಜಣ್ಣ ಬಿನ್ ರಾಮಯ್ಯ | ಬೈಚಾಪುರ | ಆದಿ ದ್ರಾವಿಡ |
| 27 | 2015-16 | ವಿ. ನಾರಾಯಣಸ್ವಾಮಿ ಬಿನ್ ವೆಂಕಟಸಿದ್ದಯ್ಯ | ಗೂಳೂರು | ಆದಿ ಕರ್ನಾಟಕ |
| 28 | 2015-16 | ಕೆಂಗಯ್ಯ ಬಿನ್ ದೊಡ್ಡ ಹಟ್ಟಿಗಯ್ಯ | ಎ.ಕೆ.ಕಾವಲ್ | ಆದಿ ಕರ್ನಾಟಕ |

| ಕ್ರ.ಸಂ | ವರ್ಷ | ಫಲಾನುಭವಿಗಳ ಹೆಸರು | ವಿಳಾಸ | ಜಾತಿ/ಉಪಜಾತಿ |
|---|---|---|---|---|
| 29 | 2015-16 | ಹನುಮಂತಯ್ಯ ಬಿನ್ ಸಂಜೀವಯ್ಯ | ಎ.ಕೆ.ಕಾವಲ್ | ಆದಿ ಕರ್ನಾಟಕ |
| 30 | 2015-16 | ಕೆಂಪಲ್ಲಯ್ಯ ಬಿನ್ ಕೆಂಪಯ್ಯ | ಕೌತುಮಾರನಹಳ್ಳಿ | ಆದಿ ದ್ರಾವಿಡ |
| 31 | 2015-16 | ವೆಂಕಟಮ್ಮ ಕೋಂ ಆಂಜಿನಪ್ಪ | ಊರ್ಡಿಗೆರೆ | ಆದಿ ಕರ್ನಾಟಕ |
| 32 | 2015-16 | ರಂಗಸ್ವಾಮಿ ಬಿನ್ ಗಂಗಹನುಮಯ್ಯ | ಐನಾಪುರ | ಆದಿ ಕರ್ನಾಟಕ |
| 33 | 2015-16 | ಗಂಗಮ್ಮ ಕೋಂ ಹನುಮಂತರಾಯಪ್ಪ | ಸಿದ್ದಾಪುರ | ಆದಿ ಕರ್ನಾಟಕ |
| 34 | 2015-16 | ರಂಗಮ್ಮ ಕೋಂ ರಂಗಯ್ಯ | ಚಿಕ್ಕನಾರವಂಗಲ | ಆದಿ ಕರ್ನಾಟಕ |
| 35 | 2015-16 | ನರಸಮ್ಮ ಕೋಂ ಪುಟ್ಟನರಸಯ್ಯ | ವಕ್ಕೊಡಿ | ಆದಿ ಕರ್ನಾಟಕ |
| 36 | 2015-16 | ಬಿ.ರಂಗಮ್ಮ ಕೋಂ ದಾಸಪ್ಪ | ದೊಡ್ಡನಾರವಂಗಲ | ಆದಿ ಕರ್ನಾಟಕ |
| 37 | 2015-16 | ಮಹಾಲಿಂಗಯ್ಯ ಬಿನ್ ಗಂಗಯ್ಯ | ನಾರಾಯಣಕೆರೆ | ಆದಿ ಕರ್ನಾಟಕ |
| 38 | 2015-16 | ರಂಗಸ್ವಾಮಯ್ಯ ಬಿನ್ ಚಿಕ್ಕ ಹುಚ್ಚಯ್ಯ | ಮುದಿಗೆರೆ | ಆದಿ ಕರ್ನಾಟಕ |
| 39 | 2015-16 | ಭಾಗ್ಯಮ್ಮ ಕೋಂ ಭೈರಪ್ಪ | ಹಾರೋನಹಳ್ಳಿ | ಆದಿ ಕರ್ನಾಟಕ |
| 40 | 2015-16 | ಕೆಂಪರಾಜು ಬಿನ್ ಕೆಂಪರಂಗಯ್ಯ | ಮಜ್ಜಿಗೆಕೆಂಪನಹಳ್ಳಿ | ಆದಿ ಕರ್ನಾಟಕ |
| 41 | 2015-16 | ಸಿದ್ದಮ್ಮ ಕೋಂ ಗಂಗಯ್ಯ | ಕುಮ್ಮಂಜಿಪಾಳ್ಯ | ಆದಿ ಕರ್ನಾಟಕ |
| 42 | 2015-16 | ನರಸಮ್ಮ ಕೋಂ ವೆಂಕಟಯ್ಯ | ಕಾಗ್ಗೆರೆ | ಆದಿ ದ್ರಾವಿಡ |
| 43 | 2015-16 | ಗಂಗಯ್ಯ ಬಿನ್ ಲೇ॥ ರಂಗಯ್ಯ | ನಾಗಾರ್ಜುನಹಳ್ಳಿ | ಆದಿ ಕರ್ನಾಟಕ |
| 44 | 2015-16 | ರಂಗಮ್ಮ ಕೋಂ ರಂಗಯ್ಯ | ಚಿಕ್ಕನಾರವಂಗಲ | ಆದಿ ಕರ್ನಾಟಕ |
| 45 | 2015-16 | ಚಿಕ್ಕಣ್ಣ ಬಿನ್ ನರಸಯ್ಯ | ನರಸಾಪುರ | ಆದಿ ದ್ರಾವಿಡ |
| 46 | 2015-16 | ಲಕ್ಷ್ಮಮ್ಮ ಉ॥ ಬೋಜಯ್ಯ ಬಿನ್ ಲಕ್ಕಯ್ಯ | ಬಿದರೆಕಟ್ಟೆ | ಆದಿ ದ್ರಾವಿಡ |
| 47 | 2015-16 | ಮಾಯಣ್ಣ ಬಿನ್ ಕೆಂಪಯ್ಯ, | ಕಂಭತ್ತನಹಳ್ಳಿ | ಆದಿ ಕರ್ನಾಟಕ |
| 48 | 2015-16 | ಮೂಡಲಗಿರಯ್ಯ ಬಿನ್ ಲೇ॥ ವೆಂಕಟಯ್ಯ | ರಾಗಿಮುದ್ದನಹಳ್ಳಿ | ಆದಿ ಕರ್ನಾಟಕ |
| 49 | 2015-16 | ನರಸಮ್ಮ ಕೋಂ ಚಿಕ್ಕ ಹನುಮಂತಯ್ಯ | ಹಿರೇದೊಡ್ಡವಾಡಿ | ಆದಿ ಕರ್ನಾಟಕ |
| 50 | 2015-16 | ಮಹಾದೇವಯ್ಯ ಬಿನ್ ಲೇ॥ ಕಟ್ರಯ್ಯ | ಗೋವಿಂದರಾಜಪುರ | ಆದಿ ಕರ್ನಾಟಕ |
| 51 | 2015-16 | ಚಿಕ್ಕಣ್ಣ ಬಿನ್ ವೆಂಕಟಾಚಲಯ್ಯ | ವಡ್ಡರಹಳ್ಳಿ | ಆದಿ ಕರ್ನಾಟಕ |
| 52 | 2015-16 | ಹುಚ್ಚಮ್ಮ ಕೋಂ ಲೇ॥ ಸಿದ್ದಯ್ಯ | ಚಿಕ್ಕಗೊಲ್ಲರಹಳ್ಳಿ | ಆದಿ ಕರ್ನಾಟಕ |
| 53 | 2015-16 | ರಂಗನರಸಯ್ಯ ಬಿನ್ ಗ್ಗವಿರಂಗಯ್ಯ | ರಂಗನಾಥಪುರ | ಆದಿ ಕರ್ನಾಟಕ |
| 54 | 2015-16 | ನರಸಿಂಹಯ್ಯ ಬಿನ್ ಲೇ॥ ಸಿದ್ದಿಂಗಯ್ಯ | ದೊಡ್ಡ ಗೊಲ್ಲರಹಳ್ಳಿ | ಆದಿ ಕರ್ನಾಟಕ |
| 55 | 2015-16 | ದೊಡ್ಡನರಸಯ್ಯ ಬಿನ್ ಹಟ್ಟಿನರಸಯ್ಯ | ಮುದಿಗೆರೆ | ಆದಿ ಕರ್ನಾಟಕ |
| 56 | 2015-16 | ನಟರಾಜು ಬಿನ್ ಲಕ್ಷ್ಮಮ್ಮ | ಹಾಲುನೂರು | ಆದಿ ದ್ರಾವಿಡ |
| 57 | 2015-16 | ಗಂಗಮ್ಮ ಕೋಂ ಹನುಮಂತಯ್ಯ | ಎ.ಕೆ.ಕಾವಲ್ | ಆದಿ ಕರ್ನಾಟಕ |
| 58 | 2015-16 | ಲಕ್ಷ್ಮಯ್ಯ ಬಿನ್ ತಿಮ್ಮಯ್ಯ | ಹೆಬ್ಬಾಕ | ಆದಿ ಕರ್ನಾಟಕ |
| 59 | 2015-16 | ದೊಡ್ಡಯ್ಯ ಬಿನ್ ಲೇ॥ ಕೆಂಪಯ್ಯ | ಹೆಬ್ಬಾಕ | ಆದಿ ಕರ್ನಾಟಕ |
| 60 | 2015-16 | ಲಕ್ಷ್ಮಮ್ಮ ಕೋಂ ಸಿದ್ದಲಿಂಗಯ್ಯ | ಅಜ್ಜಗೊಂಡನಹಳ್ಳಿ | ಆದಿ ಕರ್ನಾಟಕ |

| ಕ್ರ.ಸಂ | ವರ್ಷ | ಫಲಾನುಭವಿಗಳ ಹೆಸರು | ವಿಳಾಸ | ಜಾತಿ/ಉಪಜಾತಿ |
|---|---|---|---|---|
| 61 | 2015-16 | ನಾಗರಾಜು ಬಿನ್ ದೊಡ್ಡನರಸಯ್ಯ | ಮಲ್ಲಸಂದ್ರ | ಆದಿ ದ್ರಾವಿಡ |
| 62 | 2015-16 | ಚಿಕ್ಕ ಕೆಂಪಯ್ಯ ಬಿನ್ ದೊಡ್ಡಯ್ಯ | ಸಿಂಗೀಪುರ | ಆದಿ ಕರ್ನಾಟಕ |
| 63 | 2015-16 | ನರಸಮ್ಮ ಕೋಂ ಹನುಮಂತಯ್ಯ | ಗೂಳೂರು | ಆದಿ ಕರ್ನಾಟಕ |
| 64 | 2015-16 | ಮಾಯಣ್ಣ ಬಿನ್ ಕೆಂಪಯ್ಯ, | ಕಂಭತ್ತನಹಳ್ಳಿ | ಆದಿ ಕರ್ನಾಟಕ |
| 65 | 2015-16 | ವೆಂಕಟರಾಮಯ್ಯ ಬಿನ್ ಗಂಗಯ್ಯ | ಹೆಬ್ಬಾಕ | ಆದಿ ಕರ್ನಾಟಕ |
| 1 | 2016-17 | ಕೆಂಪಯ್ಯ ಬಿನ್ ಚಿಕ್ಕಕೆಂಪಯ್ಯ | ವಡ್ಡರಹಳ್ಳಿ | ಆದಿ ಕರ್ನಾಟಕ |
| 2 | 2016-17 | ಚಿಕ್ಕಣ್ಣ ಬಿನ್ ದೊಡ್ಡನರಸಯ್ಯ | ಕುಂಕುಮನಹಳ್ಳಿ | ಆದಿ ದ್ರಾವಿಡ |
| 3 | 2016-17 | ಚಿಕ್ಕಣ್ಣ ಬಿನ್ ಚಿಕ್ಕಕೆಂಪಯ್ಯ | ಬೀರನಕಲ್ಲು | ಆದಿ ದ್ರಾವಿಡ |
| 4 | 2016-17 | ಕುಮಾರ್ ಬಿನ್ ಲೇ॥ ಭೀಮಯ್ಯ | ಚಿಕ್ಕನಾರವಂಗಲ | ಆದಿ ಕರ್ನಾಟಕ |
| 5 | 2016-17 | ದಾಸಪ್ಪ ಬಿನ್ ಪುಟ್ಟನರಸಯ್ಯ | ಕೊತ್ತಿಹಳ್ಳಿ | ಆದಿ ದ್ರಾವಿಡ |
| 6 | 2016-17 | ಕೃಷ್ಣಪ್ಪ ಬಿನ್ ಪೆದ್ದಯ್ಯ | ಭೋವಿಪಾಳ್ಯ | ಭೋವಿ |
| 7 | 2016-17 | ಚಿಕ್ಕರಂಗಯ್ಯ ಬಿನ್ ಲೇ॥ ದೊಡ್ಡಯ್ಯ | ಬೀರನಕಲ್ಲು | ಆದಿ ಕರ್ನಾಟಕ |
| 8 | 2016-17 | ಎಂ.ಸೀನಾ ಬಿನ್ ಮುನಿಯಪ್ಪ | ಕೊತ್ತಿಹಳ್ಳಿ | ಆದಿ ದ್ರಾವಿಡ |
| 9 | 2016-17 | ಕದುರಯ್ಯ ಬಿನ್ ಕದುರಯ್ಯ | ಬೈಚಾಪುರ | ಆದಿ ದ್ರಾವಿಡ |
| 10 | 2016-17 | ಚಿಕ್ಕತಿಮ್ಮಯ್ಯ ಬಿನ್ ತಿಮರಾಯಪ್ಪ | ನೇರಳಾಪುರ | ಆದಿ ದ್ರಾವಿಡ |
| 11 | 2016-17 | ವೆಂಕಟಪ್ಪ ಬಿನ್ ಲೇ॥ ನರಸಯ್ಯ | ಕುಮಂಜಿಪಾಳ್ಯ | ಭೋವಿ |
| 12 | 2016-17 | ನರಸಯ್ಯ ಬಿನ್ ಲೇ॥ ಹನುಮಂತಯ್ಯ | ಮಸ್ಕಲ್ | ಆದಿ ಕರ್ನಾಟಕ |
| 13 | 2016-17 | ಲಕ್ಷ್ಮಮ್ಮ ಕೋಂ ಲೇ॥ ರಂಗಸ್ವಾಮಯ್ಯ | ಕೈದಾಳ | ಆದಿ ಕರ್ನಾಟಕ |
| 14 | 2016-17 | ಜಿ.ಎಫ್. ಬದನೂರು ಬಿನ್ ಲೇ॥ ಪಕೀರಪ್ಪ | ಗೂಳೂರು | ಆದಿ ದ್ರಾವಿಡ |
| 15 | 2016-17 | ರತ್ನಮ್ಮ ಕೋಂ ಕೃಷ್ಣಮೂರ್ತಿ | ಹಾಲಹೊಸಹಳ್ಳಿ | ಆದಿ ಕರ್ನಾಟಕ |
| 16 | 2016-17 | ಮಂಜಹನುಮಮ್ಮ ಕೋಂ ಲೇ॥ತಿಮ್ಮಯ್ಯ | ದೊಡ್ಡಗೊಲ್ಲಹಳ್ಳಿ | ಆದಿ ದ್ರಾವಿಡ |
| 17 | 2016-17 | ಜಯಮ್ಮ ಕೋಂ ಗಿರಿಯಪ್ಪ | ಬಿದರಕಟ್ಟೆ | ಆದಿ ಕರ್ನಾಟಕ |
| 18 | 2016-17 | ನರಸಿಂಹಯ್ಯ ಬಿನ್ ಮೂಡ್ಲಯ್ಯ | ರಾಯವಾರ | ಆದಿ ದ್ರಾವಿಡ |
| 19 | 2016-17 | ಹುಚ್ಚಯ್ಯ ಬಿನ್ ಕದರಯ್ಯ | ಗುಲಗಂಜಿಹಳ್ಳಿ | ಆದಿ ಕರ್ನಾಟಕ |
| 20 | 2016-17 | ಹುಚ್ಚಮ್ಮ ಕೋಂ ಚಿಕ್ಕಗಂಗಯ್ಯ | ವಡೇರಪುರ | ಆದಿ ಕರ್ನಾಟಕ |
| 21 | 2016-17 | ವೆಂಕಟರಮಣಯ್ಯ ಬಿನ್ ಕೆಂಚಯ್ಯ | ಹಾಲುಗೊಂಡಹಳ್ಳಿ | ಆದಿ ದ್ರಾವಿಡ |
| 22 | 2016-17 | ಕದರಪ್ಪ ಬಿನ್ ಚಿಕ್ಕಣ್ಣ | ಸೀತಕಲ್ಲು | ಆದಿ ಕರ್ನಾಟಕ |
| 23 | 2016-17 | ಸುಗ್ಗಮ್ಮ ಕೋಂ ಹನುಮಯ್ಯ | ಢಣನಾಯಕನಪುರ | ಆದಿ ದ್ರಾವಿಡ |
| 24 | 2016-17 | ರಾಮಕ್ಕ ಕೋಂ ಲೇ॥ ನರಸಯ್ಯ | ನಂದಿಹಳ್ಳಿ | ಆದಿ ಕರ್ನಾಟಕ |
| 25 | 2016-17 | ರಂಗಧಾಮ ಬಿನ್ ದೊಡ್ಡಯ್ಯ | ಭಾಣಾವರ | ಆದಿ ಕರ್ನಾಟಕ |
| 26 | 2016-17 | ಸೀಬಿಕೆಂಪಯ್ಯ ಬಿನ್ ಬುಡ್ಡನಸೀಬಯ್ಯ | ಸೋರೆಕುಂಟೆ | ಆದಿ ಕರ್ನಾಟಕ |
| 27 | 2016-17 | ಲಕ್ಷ್ಮಮ್ಮ ಕೋಂ ದೊಡ್ಡಓಬಳಯ್ಯ | ಬೆಳ್ಳಾವಿ | ಆದಿ ಕರ್ನಾಟಕ |

| ಕ್ರ.ಸಂ | ವರ್ಷ | ಫಲಾನುಭವಿಗಳ ಹೆಸರು | ವಿಳಾಸ | ಜಾತಿ/ಉಪಜಾತಿ |
|---|---|---|---|---|
| 28 | 2016-17 | ಚಿಕ್ಕತಿಮ್ಮಯ್ಯ ಬಿನ್ ಲೇ|| ನರಸಿಂಹಯ್ಯ | ಪೆರಮನಹಳ್ಳಿ | ಆದಿ ದ್ರಾವಿಡ |
| 1 | 2017-18 | ಚಿಕ್ಕ ಉಡೇದಯ್ಯ ಬಿನ್ ಉಡೇದಯ್ಯ | ಕುಂಕುಮನಹಳ್ಳಿ | ಆದಿ ದ್ರಾವಿಡ |
| 2 | 2017-18 | ಬಸವರಾಜು ಬಿನ್ ದೊಡ್ಡಸಿದ್ದಲಿಂಗಯ್ಯ | ಮಲ್ಲಸಂದ್ರ | ಆದಿ ಕರ್ನಾಟಕ |
| 3 | 2017-18 | ಸಿದ್ದಲಿಂಗಮ್ಮ ಕೋಂ ಹನುಮಯ್ಯ, | ನರಸಾಪುರ | ಆದಿ ದ್ರಾವಿಡ |
| 4 | 2017-18 | ಶಿವಮ್ಮ ಕೋಂ ರಾಮಯ್ಯ | ಯಲ್ಲಾಪುರ | ಆದಿ ಕರ್ನಾಟಕ |
| 5 | 2017-18 | ಮಣ್ಣಮ್ಮ ಕೋಂ ದಾಸಪ್ಪ, | ಬೀರನಕಲ್ಲು | ಆದಿ ದ್ರಾವಿಡ |
| 6 | 2017-18 | ಹನುಮನರಸಯ್ಯ ಬಿನ್ ಚಿಕ್ಕಣ್ಣ | ಮಾದಗೊಂಡನಹಳ್ಳಿ | ಆದಿ ಕರ್ನಾಟಕ |
| 7 | 2017-18 | ಗಂಗಮ್ಮ ಕೋಂ ಹೊಸಳಯ್ಯ | ಬ್ಯಾತ | ಆದಿ ಕರ್ನಾಟಕ |
| 8 | 2017-18 | ರೇಣುಕಮ್ಮ ಕೋಂ ನರಸಿಂಹಯ್ಯ | ಕುಪ್ಪೂರು | ಆದಿ ಕರ್ನಾಟಕ |
| 9 | 2017-18 | ಸಿದ್ದಲಕ್ಷ್ಮಮ್ಮ ಕೋಂ ಹನುಮಂತಯ್ಯ | ಮಷಾಣಾಪುರ | ಆದಿ ಕರ್ನಾಟಕ |
| 10 | 2017-18 | ನಾಗಯ್ಯ ಬಿನ್ ಓಬಳಯ್ಯ | ಬೆಳ್ಳಾವಿ | ಆದಿ ಕರ್ನಾಟಕ |
| 11 | 2017-18 | ಚಂದ್ರಯ್ಯ ಬಿನ್ ನಂಜಯ್ಯ, | ಬಳ್ಳಾಪುರ | ಆದಿ ಕರ್ನಾಟಕ |
| 12 | 2017-18 | ನರಸಿಂಹಮೂರ್ತಿ ಬಿನ್ ಲೇ|| ಪುಟ್ಟನರಸಯ್ಯ | ಬೆಳ್ಳಾವಿ | ಆದಿ ಕರ್ನಾಟಕ |
| 13 | 2017-18 | ನಾಗರಾಜು ಬಿನ್ ಲೇ|| ಗಂಗಯ್ಯ | ಮುದಿಗೆರೆ | ಆದಿ ಕರ್ನಾಟಕ |
| 14 | 2017-18 | ಶ್ರೀನಿವಾಸಮೂರ್ತಿ ಬಿನ್ ಬೈಲ ಹನುಮಯ್ಯ | ಯಲದಹಳ್ಳಿ | ಆದಿ ಕರ್ನಾಟಕ |
| 15 | 2017-18 | ನಾರಾಯಣಮೂರ್ತಿ ಬಿನ್ ನರಸಿಯಪ್ಪ | ಮುತ್ಸಂದ್ರ | ಆದಿ ಕರ್ನಾಟಕ |
| 16 | 2017-18 | ಗಂಗಯ್ಯ ಬಿನ್ ಚಿಕ್ಕಣ್ಣ | ಚನ್ನವಳ್ಳಿ | ಆದಿ ಕರ್ನಾಟಕ |
| 17 | 2017-18 | ಎಸ್.ಪಾತಯ್ಯ ಬಿನ್ ಸಣ್ಣ ಹುಚ್ಚಯ್ಯ, | ಅರೆಯೂರು | ಆದಿ ಕರ್ನಾಟಕ |
| 18 | 2017-18 | ಶಿವಲಿಂಗಯ್ಯ ಬಿನ್ ಸಿದ್ದಲಿಂಗಯ್ಯ | ಅರೆಯೂರು | ಆದಿ ಕರ್ನಾಟಕ |
| 19 | 2017-18 | ನರಸಿಂಹಯ್ಯ ಬಿನ್ ಚಿಕ್ಕನರಸಯ್ಯ | ಗರಗದಕುಪ್ಪೆ | ಆದಿ ಕರ್ನಾಟಕ |
| 20 | 2017-18 | ಪುಟ್ಟಮ್ಮ ಕೋಂ ಮಾರಯ್ಯ, | ಬಳಗೆರೆ | ಆದಿ ಕರ್ನಾಟಕ |
| 21 | 2017-18 | ಜಯಮ್ಮ ಕೋಂ ಹನುಮಂತಯ್ಯ | ದೊಡ್ಡಗುಣಿ | ಆದಿ ದ್ರಾವಿಡ |
| 22 | 2017-18 | ಮಾರಹನುಮಯ್ಯ ಬಿನ್ ಲೇ|| ಆಂಜಿನಪ್ಪ | ಹಾಲುಗೊಂಡನಹಳ್ಳಿ | ಆದಿ ದ್ರಾವಿಡ |
| 23 | 2017-18 | ಬೋಗಯ್ಯ ಬಿನ್ ದಾಸಪ್ಪ | ಕೆಸರುಮಡು | ಆದಿ ದ್ರಾವಿಡ |
| 24 | 2017-18 | ದೊಡ್ಡಬೈರಯ್ಯ ಬಿನ್ ಹುಚ್ಚಯ್ಯ | ಕದರನಹಳ್ಳಿ | ಆದಿ ಕರ್ನಾಟಕ |
| 25 | 2017-18 | ಹನುಮಂತರಾಯಪ್ಪ ಬಿನ್ ನರಸಯ್ಯ | ಸಾತ್‌ಘಟ್ಟ | ಆದಿ ಕರ್ನಾಟಕ |
| 26 | 2017-18 | ನರಸಪ್ಪ ಬಿನ್ ಗಂಗಯ್ಯ | ರಾಮಯ್ಯನಪಾಳ್ಯ | ಆದಿ ಕರ್ನಾಟಕ |
| 27 | 2017-18 | ತಿಮ್ಮಯ್ಯ ಬಿನ್ ಕೆಂಪಯ್ಯ, | ವಿರುಪಸಂದ್ರ | ಆದಿ ಕರ್ನಾಟಕ |
| 28 | 2017-18 | ವೆಂಕಟಪ್ಪ ಬಿನ್ ಚಿಕ್ಕಣ್ಣ | ಕೆ.ಪಾಲಸಂದ್ರ | ಆದಿ ದ್ರಾವಿಡ |
| 29 | 2017-18 | ರವೀಂದ್ರ ಎಂ.ವಿ. ಬಿನ್ ವೆಂಕಟಪ್ಪ | ಮುಳುಕುಂಟೆ | ಆದಿ ಕರ್ನಾಟಕ |
| 30 | 2017-18 | ಸಣ್ಣಕದರಯ್ಯ ಬಿನ್ ಕರಿನರಸಯ್ಯ | ಸಾಸಲು | ಆದಿ ಕರ್ನಾಟಕ |
| 31 | 2017-18 | ಚಿಕ್ಕಕದರಯ್ಯ ಬಿನ್ ಕೆಂಪಕದರಯ್ಯ | ಸಿದ್ದಾಪುರ | ಆದಿ ಕರ್ನಾಟಕ |

8

| ಕ್ರ.ಸಂ | ವರ್ಷ | ಫಲಾನುಭವಿಗಳ ಹೆಸರು | ವಿಳಾಸ | ಜಾತಿ/ಉಪಜಾತಿ |
|---|---|---|---|---|
| 32 | 2017-18 | ನರಸಹನುಮಯ್ಯ ಬಿನ್ ಹನುಮಯ್ಯ | ಹೊಳಕಲ್ಲು | ಆದಿ ಕರ್ನಾಟಕ |
| 33 | 2017-18 | ಚಿಕ್ಕಮ್ಮ ಕೋಂ ರಂಗಸ್ವಾಮಯ್ಯ | ಹಭತ್ತನಹಳ್ಳಿ | ಆದಿ ದ್ರಾವಿಡ |
| 34 | 2017-18 | ಲಕ್ಷ್ಮೀನರಸಿಂಹಯ್ಯ ಬಿನ್ ದೊಡ್ಡ ಹನುಮಯ್ಯ | ಹೆಬ್ಬಾಕ | ಆದಿ ಕರ್ನಾಟಕ |
| 35 | 2017-18 | ಬಸವರಾಜು ಬಿನ್ ನರಸಿಂಹಯ್ಯ | ಬೈಚಾಪುರ | ಆದಿ ಕರ್ನಾಟಕ |
| 36 | 2017-18 | ರಂಗಯ್ಯ ಬಿನ್ ರಾಮಬಾಣಯ್ಯ | ಕರ್ಣಕುಪ್ಪೆ | ಆದಿ ಕರ್ನಾಟಕ |
| 37 | 2017-18 | ನರಸಿಂಹಯ್ಯ ಬಿನ್ ಕುಂಬಯ್ಯ | ತಿಮ್ಮನಾಯಕನಹಳ್ಳಿ | ಆದಿ ಕರ್ನಾಟಕ |
| 38 | 2017-18 | ರವಿಕುಮಾರ್ ಬಿನ್ ಲೇ॥ ಚಿಕ್ಕನರಸಯ್ಯ | ತೊಂಡಗೆರೆ | ಆದಿ ಕರ್ನಾಟಕ |
| 39 | 2017-18 | ಗಿರಿಯಪ್ಪ ಬಿನ್ ಹುಚ್ಚಯ್ಯ | ಮುದಿಗೆರೆಪಾಳ್ಯ | ಆದಿ ಕರ್ನಾಟಕ |
| 40 | 2017-18 | ಹನುಮಕ್ಕ ಕೋಂ ಲೇ॥ ರಂಗಯ್ಯ | ವೀರನಾಯ್ಕನಹಳ್ಳಿ | ಆದಿ ದ್ರಾವಿಡ |
| 41 | 2017-18 | ಲಕ್ಷ್ಮಯ್ಯ ಬಿನ್ ಚಿಕ್ಕಣ್ಣ | ಅರೇಗುಜ್ಜನಹಳ್ಳಿ | ಆದಿ ಕರ್ನಾಟಕ |
| 42 | 2017-18 | ಲಕ್ಷ್ಮಮ್ಮ ಕೋಂ ಲೇ॥ ನರಸಯ್ಯ | ಮುದಿಗೆರೆ | ಆದಿ ದ್ರಾವಿಡ |
| 43 | 2017-18 | ಶಿವರಾಮಯ್ಯ ಬಿನ್ ಹನುಮಂತಯ್ಯ | ಅಸಲೀಪುರ | ಆದಿ ಕರ್ನಾಟಕ |
| 44 | 2017-18 | ನರಸಮ್ಮ ಕೋಂ ಲೇ॥ ಚಿಕ್ಕನರಸಯ್ಯ | ಸ್ವಾಂದೇನಹಳ್ಳಿ | ಆದಿ ಕರ್ನಾಟಕ |
| 45 | 2017-18 | ಪುಟ್ಟಮ್ಮ ಕೋಂ ಚಿಕ್ಕ ಹನುಮಂತಯ್ಯ | ಹಾರೋನಹಳ್ಳಿ | ಆದಿ ಕರ್ನಾಟಕ |
| 46 | 2017-18 | ಮಂಜುನಾಥ ಬಿನ್ ನರಸಿಂಹಯ್ಯ | ಬಳ್ಳಾಪುರ | ಆದಿ ದ್ರಾವಿಡ |
| 47 | 2017-18 | ನಾರಾಯಣಪ್ಪ ಬಿನ್ ಗಂಗಯ್ಯ | ಮುದಿಗೆರೆ | ಆದಿ ಕರ್ನಾಟಕ |

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

ವಿಷಯ:- ಕರ್ನಾಟಕ ರಾಜ್ಯದ ಸರ್ಕಾರಿ ಸ್ವಾಮ್ಯದ ಜಲಸಂಪನ್ಮೂಲಗಳಾದ ಜಲಾಶಯಗಳು, ಕೆರೆಗಳು, ನದಿಗಳು, ತೊರೆಗಳು ಮ... ಅಳಿವೆಗಳು ಹಾಗೂ ಇತರೆ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಪಟ್ಟಂತೆ ರೂಪಿಸಲಾದ ಪರಿಷ್ಕೃತ ನಿಯಮಗಳ ಒಳನಾಡು ಮೀನುಗಾರಿಕಾ ಕಾರ್ಯನೀತಿ-2014ನ್ನು ಹೊರಡಿಸುವ ಬಗ್ಗೆ.

ಓದಲಾಗಿದೆ:- (1) ಸರ್ಕಾರದ ಆದೇಶ ಸಂಖ್ಯೆ:ಪಸಂಮೀ 167 ಮೀಇಇ 2005 ದಿನಾಂಕ:28/01/2006.

(2) ಮೀನುಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ಮಇಪ (2)/130/2011-12, ದಿನಾಂಕ:14-11-2013 ಮತ್ತು 21-11-2013.

ಪ್ರಸ್ತಾವನೆ:

ರಾಜ್ಯದ ಹಿನ್ನೀರು ಮತ್ತು ಒಳನಾಡು ಜಲಸಂಪನ್ಮೂಲಗಳಲ್ಲಿ ಸುಸ್ಥಿರ ಮೀನುಗಾರಿಕೆ ಉತ್ತೇಜಿಸಲು ಮೀನುಗಾರಿಕೆ ಹಕ್ಕುಗಳ ವಿಲೇವಾರಿ ಸಂಬಂಧ 2006ರಲ್ಲಿ ಪ್ರಕಟಿಸಲಾದ ಗುತ್ತಿಗೆ ನಿಯಮಗಳನ್ನು ಪರಿಷ್ಕರಿಸಲು ಸರ್ಕಾರವು ನಿರ್ಧರಿಸಿದೆ.

ಕರ್ನಾಟಕ ರಾಜ್ಯದಲ್ಲಿ ಮೀನುಗಾರಿಕೆ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಒಟ್ಟು 5.65 ಲಕ್ಷ ಹೆಕ್ಟೇರ್ ಜಲವಿಸ್ತೀರ್ಣವುಳ್ಳ ಜಲಾಶಯಗಳು ಮತ್ತು ಕೆರೆಗಳು ಇರುತ್ತವೆ. ಇವುಗಳಲ್ಲಿ 2.72 ಲಕ್ಷ ಹೆ. ಜಲವಿಸ್ತೀರ್ಣವುಳ್ಳ 82 ಜಲಾಶಯಗಳು, 1.72 ಲಕ್ಷ ಹೆ. ಜಲವಿಸ್ತೀರ್ಣವುಳ್ಳ 3399 ಕೆರೆಗಳು, 1.21 ಲಕ್ಷ ಹೆ. ಜಲವಿಸ್ತೀರ್ಣವುಳ್ಳ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಕೆರೆಗಳು ಇರುತ್ತವೆ. ಅಲ್ಲದೆ, ಸುಮಾರು 5813 ಕಿ.ಮೀ. ಉದ್ದದ ನದಿಗಳು ಮತ್ತು ತೊರೆಗಳು ಇವೆ. ಈ ಎಲ್ಲಾ ಜಲಸಂಪನ್ಮೂಲಗಳಿಂದ ಕರ್ನಾಟಕದ ಒಳನಾಡು ಮೀನಿನ ಉತ್ಪಾದನೆ ಸುಮಾರು 2.00 ಲಕ್ಷ ಟನ್‌ನಷ್ಟಿದೆ. ಇದು ರಾಜ್ಯದ ಒಟ್ಟು ಮೀನಿನ ಉತ್ಪಾದನೆಯ ಶೇ.48ರಷ್ಟು ಇರುತ್ತದೆ. ಮುಂದಿನ ದಿನಗಳಲ್ಲಿ ಒಳನಾಡಿನ ಮೀನು ಉತ್ಪಾದನೆ ತೀವ್ರಗತಿಯಲ್ಲಿ ಬೆಳವಣಿಗೆಯಾಗುವ ನಿರೀಕ್ಷೆಯಿದ್ದು, ರಾಜ್ಯದ ಒಟ್ಟು ಮೀನು ಉತ್ಪಾದನೆಯಲ್ಲಿ ಹೆಚ್ಚಿನ ಉತ್ಪಾದನೆಯನ್ನು ಒಳನಾಡು ಮೀನು ಕೃಷಿಯಿಂದ ಒದಗಿಸುವ ಹೆಚ್ಚಿನ ಸಾಧ್ಯತೆಗಳಿರುತ್ತದೆ.

ರಾಜ್ಯದಲ್ಲಿರುವ ಬಹುಪಾಲು ಒಳನಾಡು ಜಲಸಂಪನ್ಮೂಲಗಳು ನೀರಿಗಾಗಿ ಮಳೆಯನ್ನೇ ಅವಲಂಬಿಸಿದ್ದು, ಹಲವು ಕೆರೆಗಳು ಮುಂಗಾರು ಮಳೆಯಿಂದ ತುಂಬುವ ಸಾಧ್ಯತೆಗಳಿದ್ದು, ಕೆಲವು ಕೆರೆಗಳು ಹಿಂಗಾರು ಮಳೆಯನ್ನು ಆಶ್ರಯಿಸಿರುತ್ತವೆ. ಹಾಗಾಗಿ ಒಳನಾಡು ಜಲಸಂಪನ್ಮೂಲಗಳಲ್ಲಿ ಸದಾ ನೀರು ನಿಲ್ಲುವ ಸರ್ವಕಾಲಿಕ ಕೆರೆಗಳ ಸಂಖ್ಯೆ ಬಹಳ ಕಡಿಮೆ ಇರುತ್ತವೆ. ಗರಿಷ್ಟ ಸಂಖ್ಯೆಯ ಕೆರೆಗಳು ಅರೆಕಾಲಿಕ ಕೆರೆಗಳಾಗಿದ್ದು, ಕೇವಲ 4-5 ತಿಂಗಳು ಅವಧಿಗೆ ನೀರು ನಿಲ್ಲುವ ಸಾಧ್ಯತೆ ಇದ್ದು, ಹಲವಾರು ಸಂದರ್ಭಗಳಲ್ಲಿ ಮಳೆಯನ್ನು ನಿರೀಕ್ಷಿಸಿ ಜಲಸಂಪನ್ಮೂಲಗಳಲ್ಲಿ ನೀರು ಶೇಖರಣೆ ಆಗಬಹುದೆಂದು ಭಾವಿಸಿ ಮೀನು ಕೃಷಿಕರು ಮೀನು ಪಾಶುವಾರು ಹಕ್ಕನ್ನು ಪಡೆದು ನಷ್ಟಗೊಂಡಿರುವ ಹಲವು ನಿದರ್ಶನಗಳಿವೆ. ಅಲ್ಲದೆ, ಮೀನು ಕೃಷಿಗೆ ಬಹು ಮುಖ್ಯವಾಗಿ ಮೀನುಮರಿಗಳ ಲಭ್ಯತೆ ಮುಂಗಾರು ಅವಧಿಯಲ್ಲಿರುವುದರಿಂದ, ಈ ಅವಧಿಗೆ ಮುಂಚೆ ಕೆರೆಗಳ ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡಿ ಅರ್ಹ ಸಹಕಾರ ಸಂಘಗಳು ಮತ್ತು ವ್ಯಕ್ತಿಗೆ ಗುತ್ತಿಗೆಯನ್ನು ವರ್ಗಾಯಿಸದಿದ್ದಲ್ಲಿ ಮೀನು ಉತ್ಪಾದನೆ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗುವ ಸಾಧ್ಯತೆಗಳು ಇರುತ್ತವೆ.

ಒಳನಾಡು ಜಲಸಂಪನ್ಮೂಲಗಳಲ್ಲಿ ಗರಿಷ್ಟ ಮೀನು ಉತ್ಪಾದನೆ ಮಾಡುವುದು ಸರ್ಕಾರದ ಮುಖ್ಯ ಗುರಿಯಾಗಿದ್ದು, ಇದಕ್ಕೆ ಪೂರಕವಾಗಿ ಮೀನು ಪಾಶುವಾರು ಹಕ್ಕಿನ ಗುತ್ತಿಗೆ ಆದೇಶಗಳನ್ನು ಸಕಾಲದಲ್ಲಿ ಅರ್ಹ ಸಹಕಾರ ಸಂಘಗಳಿಗೆ / ವ್ಯಕ್ತಿಗಳಿಗೆ ತಲುಪಿಸುವುದು, ಮತ್ತು ಉತ್ತಮ ತಳಿಯ ಗುಣಮಟ್ಟದ ಮೀನುಮರಿಗಳನ್ನು ಸಕಾಲದಲ್ಲಿ ಮೀನು ಕೃಷಿಕರಿಗೆ ಒದಗಿಸುವುದು ಸರ್ಕಾರದ ಉದ್ದೇಶವಾಗಿರುತ್ತದೆ.

ಕರ್ನಾಟಕ ರಾಜ್ಯದಲ್ಲಿ ಒಟ್ಟು ಸುಮಾರು 5.50 ಲಕ್ಷಕ್ಕೂ ಮೀರಿದ ಒಳನಾಡು ಮೀನುಗಾರರಿದ್ದು, ಅವರಲ್ಲಿ ಸುಮಾರು 1.50 ಲಕ್ಷಕ್ಕೂ ಮೀರಿದ ಮೀನುಗಾರರು ಸಕ್ರಿಯವಾಗಿ ಮೀನುಗಾರಿಕೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಈ ಎಲ್ಲಾ ಮೀನುಗಾರರ ಸರ್ವತೋಮುಖ ಅಭಿವೃದ್ಧಿ, ಸಮಗ್ರ ಮೀನುಗಾರಿಕಾ ಚಟುವಟಿಕೆಗಳ ಮೇಲೆ ಅವಲಂಬಿತವಾಗಿರುತ್ತವೆ. ಈ ನಿಟ್ಟಿನಲ್ಲಿ ಮೀನುಗಾರರಿಗೆ ಗುಣಮಟ್ಟದ ಮೀನು ತಳಿಗಳನ್ನು ಅಭಿವೃದ್ಧಿಪಡಿಸಿ, ಸಕಾಲದಲ್ಲಿ ಒದಗಿಸುವುದಕ್ಕಾಗಿ ಮೀನುಗಾರಿಕೆ ಇಲಾಖೆಯು ಕಾರ್ಯೋನ್ಮುಖವಾಗಿರುತ್ತದೆ. ಹೆಚ್ಚಿನ ಪಾಲಿನ ಮೀನುಗಾರರು ಸರ್ಕಾರಿ ಸ್ವಾಮ್ಯದ ಜಲಸಂಪನ್ಮೂಲಗಳನ್ನು ಗುತ್ತಿಗೆ ಪಡೆದು, ಮೀನು ಕೃಷಿ ಕೈಗೊಳ್ಳುವುದರಿಂದ, ಕ್ಲುಪ್ತ ಸಮಯದಲ್ಲಿ ಜಲಸಂಪನ್ಮೂಲಗಳ ಗುತ್ತಿಗೆ ಆದೇಶಗಳು ಅವರ ಕೈ ಸೇರುವುದು ಅತಿ ಮುಖ್ಯವಾಗಿರುತ್ತದೆ. ಆದುದರಿಂದ, ಒಳನಾಡು ಜಲಸಂಪನ್ಮೂಲಗಳನ್ನು ಗುತ್ತಿಗೆ ಪಡೆಯುವ ಕಾರ್ಯ ವಿಧಾನವನ್ನು ಸರಳೀಕರಿಸಿ, ಮೀನುಗಾರರನ್ನೇ ಕೇಂದ್ರ ಬಿಂದುವನ್ನಾಗಿರಿಸಿಕೊಂಡು ನೀತಿಯನ್ನು ರೂಪಿಸಿ, ಮೀನುಗಾರರು ಮತ್ತು ಅವರ ಸಹಕಾರ ಸಂಘಗಳಿಗೆ ಆದ್ಯತೆ ನೀಡಿ, ಗುತ್ತಿಗೆ ನೀಡುವ ಅಧಿಕಾರವನ್ನು ವಿಕೇಂದ್ರೀಕರಿಸಿ, "ಸಕಾಲ"ದಲ್ಲಿ ಗುತ್ತಿಗೆ ಆದೇಶಗಳು ಮೀನುಗಾರರ ಕೈ ಸೇರಬೇಕೆನ್ನುವ ಉದ್ದೇಶ ಸರ್ಕಾರದ್ದಾಗಿರುತ್ತದೆ.

ಪ್ರಸ್ತುತ ಜಾರಿಯಲ್ಲಿರುವ ಒಳನಾಡು ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿ ನಿಯಮಗಳು 2006 ರಿಂದ ಜಾರಿಗೆ ಬಂದಿದ್ದು, ಸುಮಾರು 8 ವರ್ಷಗಳಿಂದ ಈ ನಿಯಮಾನುಸಾರ ಒಳನಾಡು ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡಲಾಗುತ್ತಿದೆ. ಕಳೆದ 8 ವರ್ಷಗಳಿಂದ ಈ ನಿಯಮಗಳ ಅನುಷ್ಠಾನದ ಅವಧಿಯಲ್ಲಿ ದ್ವಂದ್ವತೆಗಳು, ನ್ಯೂನ್ಯತೆಗಳು, ಕೆರೆಗಳನ್ನು ವಿಲೇವಾರಿ ಮಾಡುವ "ಕಾಲಕಪಟ್ಟಿ" ಯಲ್ಲಿ ಹೊಂದಾಣಿಕೆಯಿಲ್ಲದೆ ಇರುವುದು ಮತ್ತು ಈ ನಿಯಮಗಳ ಮೇಲೆ ರಾಜ್ಯದ ಹಲವು ನ್ಯಾಯಾಲಯಗಳಲ್ಲಿ, ಪ್ರಮುಖವಾಗಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ಒಳನಾಡು ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ನಿಯಮಗಳನ್ನು ಹಾಗೂ ಗುತ್ತಿಗೆ ಆದೇಶಗಳನ್ನು ಪ್ರಶ್ನಿಸಿ ದಾವೆಗಳು ದಾಖಲಾಗಿದ್ದು, ಈ ದಾವೆಗಳಲ್ಲಿ ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ಚಾಲ್ತಿಯಲ್ಲಿರುವ ಮೀನು ಪಾಶುವಾರು ಹಕ್ಕಿನ ವಿಲೇವಾರಿ ನಿಯಮಗಳನ್ನು ಪರಿಷ್ಕರಿಸುವುದು ಅಗತ್ಯವೆಂದು ಸರ್ಕಾರವು ಮನಗಂಡಿರುತ್ತದೆ.

ಆದುದರಿಂದ, ರಾಜ್ಯದ ಸರ್ಕಾರಿ ಸ್ವಾಮ್ಯದ ಎಲ್ಲಾ ಒಳನಾಡು ಜಲಸಂಪನ್ಮೂಲಗಳಲ್ಲಿ ಮೀನು ಉತ್ಪಾದನೆಯನ್ನು ಗರಿಷ್ಟ ಪ್ರಮಾಣಕ್ಕೇರಿಸುವ, ಮೀನು ಕೃಷಿಯನ್ನು ಜೀವನಾಧಾರವಾಗಿ ಅವಲಂಬಿಸಿರುವ ಒಳನಾಡು ಮೀನುಗಾರರಿಗೆ ಸ್ವಯಂ ಉದ್ಯೋಗವನ್ನು ಕಲ್ಪಿಸಿಕೊಡುವುದರ ಮುಖಾಂತರ ಅವರ ಸಾಮಾಜಿಕ ಮತ್ತು ಆರ್ಥಿಕ ಸಬಲೀಕರಣಕ್ಕೆ ಒತ್ತು ನೀಡುವ ಹಾಗೂ ಚಾಲ್ತಿಯಲ್ಲಿರುವ ಗುತ್ತಿಗೆ ನಿಯಮಾವಳಿಗಳಲ್ಲಿರುವ ನ್ಯೂನ್ಯತೆಗಳನ್ನು ಸರಿಪಡಿಸಿ ಮತ್ತು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪಿನ ಅಂಶಗಳನ್ನು ಅಳವಡಿಸಿಕೊಂಡು ಸಮಗ್ರವಾದ ಒಳನಾಡು ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿ ನಿಯಮಾವಳಿಗಳನ್ನು ರೂಪಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಮೀನುಗಾರಿಕೆ ಇಲಾಖೆಯ / ಅರಣ್ಯ ಇಲಾಖೆಯ / ಗ್ರಾಮ ಪಂಚಾಯತ್‌ಗಳ / ಜಲಸಂವರ್ಧನೆ ಯೋಜನಾ ಸಂಘದ / ಕೆರೆ ಅಭಿವೃದ್ಧಿ ಪ್ರಾಧಿಕಾರದ / ಇತರೆ ಇಲಾಖೆಗಳ / ಪ್ರಾಧಿಕಾರಗಳ / ಸರ್ಕಾರಿ ಸ್ವಾಮ್ಯದ ಸಂಸ್ಥೆಗಳ ವ್ಯಾಪ್ತಿಯಲ್ಲಿನ ಹಾಗೂ ಸರ್ಕಾರಿ ಸ್ವಾಮ್ಯದ ಒಳನಾಡು ಜಲಸಂಪನ್ಮೂಲಗಳಾದ ಜಲಾಶಯಗಳ / ಕೆರೆಗಳ / ಕೊಳಗಳ / ನದಿಗಳ / ತೊರೆಗಳ / ಅಳಿವೆಗಳ ಇತ್ಯಾದಿ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಪಟ್ಟಂತೆ ಹೊರಡಿಸಲಾಗಿದ್ದ ದಿನಾಂಕ:28-01-2006ರ ಆದೇಶ ಸಂಖ್ಯೆ:ಪಸಂಮೀ/167/ಮೀಇಇ/2005 ವನ್ನು ರದ್ದುಪಡಿಸಿ ಮೀನುಗಾರಿಕಾ ಜಲಸಂಪನ್ಮೂಲಗಳ ವಿಲೇವಾರಿ ಕಾರ್ಯನೀತಿ-2014ಕ್ಕೆ ಅನುಮೋದನೆ ನೀಡಲಾಗಿದೆ ಹಾಗೂ ಈ ಕಾರ್ಯನೀತಿಯು 2014-15ನೇ ಸಾಲಿನ ಮೀನುಗಾರಿಕಾ ಫಸಲಿ ವರ್ಷದಿಂದ ಮುಂದಿನ ಆದೇಶದವರೆಗೆ ಈ ಕೆಳಕಂಡ ಸಮಗ್ರವಾದ ಒಳನಾಡು ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿ ನಿಯಮಗಳನ್ನು ಜಾರಿಗೊಳಿಸಿ ಆದೇಶಿಸಿದೆ.

ಕಂಡಿಕೆ-1:-

ಸರ್ಕಾರಿ ಸ್ವಾಮ್ಯದ ಜಲಸಂಪನ್ಮೂಲಗಳ ಒಡೆತನವು ಯಾವುದೇ ಇಲಾಖೆಯ / ಪ್ರಾಧಿಕಾರದ / ಸರ್ಕಾರಿ ಸ್ವಾಮ್ಯದ ಸಂಸ್ಥೆಯ ವ್ಯಾಪ್ತಿಗೆ ಒಳಪಟ್ಟಿದ್ದರೂ ಕೂಡ, ಅಂತಹ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಯ ವಿಷಯವು ಮೀನುಗಾರಿಕೆ ಇಲಾಖೆಯ ವ್ಯಾಪ್ತಿಗೆ ಒಳಪಟ್ಟಿರುತ್ತದೆ.

ಕಂಡಿಕೆ-2:-

ಸರ್ಕಾರವು ಈ ಹಿಂದೆ ಹೊರಡಿಸಿದ್ದ ಸಂಖ್ಯೆ:ಪಸಂಮೀ/167/ಮೀಇಇ/2005, ದಿನಾಂಕ: 28-01-2006ರ ಆದೇಶದಲ್ಲಿನ ವಿಲೇವಾರಿ ನಿಯಮಗಳ ಪ್ರಕಾರ ವಿಲೇವಾರಿಯಾದ ಎಲ್ಲಾ ಜಲಸಂಪನ್ಮೂಲಗಳ ವಿಲೇವಾರಿ ಅವಧಿ ಮುಗಿದನಂತರ ಆ ಜಲಸಂಪನ್ಮೂಲಗಳಿಗೆ ಸಂಬಂಧಿಸಿದಂತೆ ಈ ಆದೇಶ ಜಾರಿಗೆ ಬರುತ್ತದೆ.

ಕಂಡಿಕೆ-3:-

ಒಳನಾಡು ಜಲಸಂಪನ್ಮೂಲಗಳ ವರ್ಗೀಕರಣ

I) ಕೆರೆಗಳ ವರ್ಗೀಕರಣ:

(1) ಮೀನುಗಾರಿಕೆ ಇಲಾಖಾ ವ್ಯಾಪ್ತಿಯ ಕೆರೆಗಳು:-

ಅ) 40 ಹೆಕ್ಟೇರ್‌ಗಿಂತ ಹೆಚ್ಚು ಅಚ್ಚುಕಟ್ಟು ಪ್ರದೇಶವುಳ್ಳ ಸರ್ಕಾರಿ ಸ್ವಾಮ್ಯದ ಎಲ್ಲಾ ಜಲಸಂಪನ್ಮೂಲಗಳು.

ಆ) ಗ್ರಾಮಪಂಚಾಯಿತಿಗಳಲ್ಲದ ಪಟ್ಟಣ ಪಂಚಾಯಿತಿ, ಪುರಸಭೆ, ನಗರಸಭೆ, ನಗರಪಾಲಿಕೆ, ಮಹಾನಗರಪಾಲಿಕೆ ಇತ್ಯಾದಿ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯ 40 ಹೆಕ್ಟೇರ್‌ಗಿಂತ ಕಡಿಮೆ ಅಚ್ಚುಕಟ್ಟು ಪ್ರದೇಶದವರೆಗಿನ ಸರ್ಕಾರಿ ಸ್ವಾಮ್ಯದ ಎಲ್ಲಾ ಜಲಸಂಪನ್ಮೂಲಗಳು.

(2) ಗ್ರಾಮಪಂಚಾಯತಿ ವ್ಯಾಪ್ತಿಯ ಕೆರೆಗಳು:-

40 ಹೆಕ್ಟೇರ್ ಅಚ್ಚುಕಟ್ಟು ಪ್ರದೇಶದವರೆಗಿನ ಸರ್ಕಾರಿ ಸ್ವಾಮ್ಯದ ಜಲಸಂಪನ್ಮೂಲಗಳು (ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಆದೇಶ ಸಂ.ಗ್ರಾಅಪ 165 ಜಿಪಸ 2002 ದಿನಾಂಕ 01/03/2004 ಮತ್ತು 05/04/2004ರಲ್ಲಿ 40 ಹೆಕ್ಟೇರ್ ಅಚ್ಚುಕಟ್ಟು ಪ್ರದೇಶದವರೆಗಿನ ಸರ್ಕಾರಿ ಸ್ವಾಮ್ಯದ ಜಲಸಂಪನ್ಮೂಲಗಳ ಮೀನುಗಾರಿಕೆ ಅಭಿವೃದ್ಧಿ ಮತ್ತು ಮೀನು ಪಾಶುವಾರು ಹಕ್ಕು ವಿಲೇವಾರಿಯನ್ನು ಗ್ರಾಮಪಂಚಾಯತಿಗಳಿಗೆ ನೀಡಿ ಸರ್ಕಾರವು ಆದೇಶಿಸಿರುವುದನುಸಾರ).

II) ಜಲಾಶಯಗಳ ವರ್ಗೀಕರಣ:-

(1) ಸಣ್ಣ ಜಲಾಶಯಗಳು (1000 ಹೆಕ್ಟೇರ್ ಜಲವಿಸ್ತೀರ್ಣಕ್ಕಿಂತ ಕಡಿಮೆ ಜಲವಿಸ್ತೀರ್ಣ ಹೊಂದಿರುವ ಜಲಾಶಯಗಳು).

(2) ಮಧ್ಯಮ ಜಲಾಶಯಗಳು (1001 ರಿಂದ 5000 ಹೆಕ್ಟೇರ್ ಜಲವಿಸ್ತೀರ್ಣ ಹೊಂದಿರುವ ಜಲಾಶಯಗಳು)

(3) ದೊಡ್ಡ ಜಲಾಶಯಗಳು (5001 ಹೆಕ್ಟೇರ್ ಜಲವಿಸ್ತೀರ್ಣಕ್ಕಿಂತ ಮೇಲ್ಪಟ್ಟ ಜಲಾಶಯಗಳು)

III) ನದಿ ಭಾಗ:-

1) ನದಿಯ 25 ಕಿ.ಮೀ. ಉದ್ದದ ಭಾಗ ಅಥವಾ ಆ ತಾಲ್ಲೂಕಿನ ಗಡಿಯೊಳಗೆ ಬರುವ 25 ಕಿ.ಮೀ. ಗಿಂತ ಕಡಿಮೆ ಇರುವ ಭಾಗ.

IV) ಅಳಿವೆಗಳು:-

ಕಂಡಿಕೆ-4:-

ವಿಲೇವಾರಿ ವಿಧಾನಗಳು

1) ಗುತ್ತಿಗೆ:-

(ಅ) ಜಲಸಂಪನ್ಮೂಲಗಳನ್ನು ಮೊದಲು ಅರ್ಹ ಮೀನುಗಾರರ ಸಹಕಾರ ಸಂಘಗಳಿಂದ ಅರ್ಜಿಗಳನ್ನು ಆಹ್ವಾನಿಸಿ ಗರಿಷ್ಠ 5 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಲಾಗುವುದು. ಅರ್ಜಿ ಸಲ್ಲಿಸಿದ ಮೀನುಗಾರರ ಸಹಕಾರ ಸಂಘಗಳು ಈ ಆದೇಶದ ಅನುಬಂಧ-1ರಲ್ಲಿ ನಮೂದಿಸಿರುವ ಅರ್ಹತೆಗಳನ್ನು ಹೊಂದಿರಬೇಕು ಹಾಗೂ ದಾಖಲಾತಿಗಳನ್ನು ಸಲ್ಲಿಸಬೇಕು.

(ಆ) ಪ್ರತಿ ಅರ್ಹ ಮೀನುಗಾರರ ಸಹಕಾರ ಸಂಘಕ್ಕೆ, ಆ ಸಂಘದ ಬೈಲಾ ಪ್ರಕಾರ, ಅದರ ಕಾರ್ಯ ವ್ಯಾಪ್ತಿಯಲ್ಲಿ ಗರಿಷ್ಠ 300 ಹೆಕ್ಟೇರ್ ಜಲವಿಸ್ತೀರ್ಣಕ್ಕೆ ಮೀರದಂತೆ ಗರಿಷ್ಠ ಎರಡು ಕೆರೆ ಅಥವಾ ಈ ಆದೇಶದ ಅನುಬಂಧ-2 ರಲ್ಲಿ ಪಟ್ಟಿ ಮಾಡಿರುವ ಗರಿಷ್ಠ ಒಂದು ಜಲಾಶಯದ ಅಥವಾ

ಗರಿಷ್ಠ ಎರಡು ನದಿ ಭಾಗ ಮಾತ್ರ ಗುತ್ತಿಗೆಗೆ ನೀಡುವುದು. (300 ಹೆ. ಒಳಪಟ್ಟಿರುವ ಮೀನು ಜಲಸಂಪನ್ಮೂಲಗಳಿದ್ದು ಸಂದರ್ಭದಲ್ಲಿ ಕೇವಲ ಒಂದು ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಮಾತ್ರ ಗುತ್ತಿಗೆ ಪಡೆಯಲು ಸದರಿ ಮೀನುಗಾರರ ಸಹಕಾರ ಸಂಘ ಅರ್ಹತೆಯನ್ನು ಹೊಂದಿರುತ್ತದೆ.)

(ಇ) ಒಂದೇ ಕೆರೆಗೆ, ಕೆರೆಯ ವ್ಯಾಪ್ತಿಯ ಹಲವಾರು ಮೀನುಗಾರಿಕೆ ಸಹಕಾರಿ ಸಂಘಗಳು ಅರ್ಜಿಗಳನ್ನು ಸಲ್ಲಿಸಿದಲ್ಲಿ ಮೊದಲನೆಯ ಆದ್ಯತೆಯನ್ನು ಗ್ರಾಮ ಮಟ್ಟದ ಮೀನುಗಾರಿಕೆ ಸಹಕಾರ ಸಂಘಕ್ಕೆ, ನಂತರದ ಆದ್ಯತೆಯನ್ನು ಅನುಕ್ರಮವಾಗಿ ಹೋಬಳಿ ಮಟ್ಟದ, ತಾಲ್ಲೂಕು ಮಟ್ಟದ ಅಥವಾ ಜಿಲ್ಲಾ ಮಟ್ಟದ ಮೀನುಗಾರರ ಸಹಕಾರ ಸಂಘಕ್ಕೆ ನೀಡುವುದು.

(ಈ) ಒಂದೇ ಆದ್ಯತೆಯಲ್ಲಿ ಬರುವ ಒಂದಕ್ಕಿಂತ ಹೆಚ್ಚಿನ ಮೀನುಗಾರರ ಸಹಕಾರ ಸಂಘಗಳು ಒಂದೇ ಜಲಸಂಪನ್ಮೂಲಕ್ಕೆ ಅರ್ಜಿ ಸಲ್ಲಿಸಿದ್ದಲ್ಲಿ, ಅರ್ಜಿ ಸಲ್ಲಿಸಿರುವ ಅರ್ಹ ಮೀನುಗಾರರ ಸಹಕಾರ ಸಂಘಗಳ ನಡುವೆ ಮಾತ್ರ ಹರಾಜು ನಡೆಸಿ ವಿಲೇವಾರಿ ಮಾಡುವುದು.

(ಉ) ಕೆಲವು ಆಯ್ದ ನದಿ ಭಾಗಗಳನ್ನು / ಅಳಿವೆಗಳನ್ನು ಮಾತ್ರ ಮೀನುಗಾರರ ಸಹಕಾರ ಸಂಘಗಳು ಅಥವಾ ಮತ್ಸ್ಯ ಪ್ರಭೇದಗಳ ಸಂರಕ್ಷಣೆ ಜೀವ ವೈವಿಧ್ಯಗಳ ಸಂರಕ್ಷಣೆ ಅಥವಾ ಕರ್ನಾಟಕದ ವಿಶೇಷ ಮೀನು ಪ್ರಭೇದಗಳ ಸಂರಕ್ಷಣೆಗೋಸ್ಕರ ಸಂಘಟಿಸಿರುವ ವನ್ಯ ಜೀವಿ ಸಂಸ್ಥೆಗಳು, ಜೀವ ವೈವಿಧ್ಯ ಸಂರಕ್ಷಣಾ ಸಂಘಗಳಿಗೆ ಗರಿಷ್ಠ ಎರಡು ನದಿ ಭಾಗಗಳನ್ನು ಮಾತ್ರ ಗುತ್ತಿಗೆ ನೀಡಬಹುದು. ಈ ವನ್ಯ ಜೀವಿ ಸಂಘಗಳು ನೋಂದಾಯಿತ ಸಂಘಗಳಾಗಿರಬೇಕು. ಮೀನು ಪ್ರಭೇದಗಳ ಸಂರಕ್ಷಣೆಯಲ್ಲಿ ತೊಡಗಿಸಿಕೊಂಡಿರಬೇಕು. ಹಾಗೂ ಅವರ ಬೈಲಾಗಳಲ್ಲಿ ಮೀನು ಸಂರಕ್ಷಣೆ ಒಂದು ಪ್ರಮುಖ ಉದ್ದೇಶವಾಗಿರಬೇಕು.

2) ಟೆಂಡರ್ ಮತ್ತು ಹರಾಜು:–

ಗುತ್ತಿಗೆಗೆ ಕೋರದ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಟೆಂಡರ್–ಕಂ–ಹರಾಜು ಮೂಲಕ ಹೆಚ್ಚಿನ ಪ್ರಕಾರ ನೀಡಿ ಗರಿಷ್ಠ 5 (ಐದು) ವರ್ಷಗಳ ಅವಧಿಗೆ ವಿಲೇವಾರಿ ಮಾಡತಕ್ಕದ್ದು. ಈ ವಿಧಾನದಲ್ಲಿ ಮೊದಲು ಹರಾಜನ್ನು ನಡೆಸುವುದು. ನಂತರ ಟೆಂಡರ್ ಅರ್ಜಿಗಳನ್ನು ತೆರೆಯುವುದು. ಟೆಂಡರ್ ಅರ್ಜಿಗಳಲ್ಲಿ ನಮೂದಿಸಿರುವ ಅತಿ ಹೆಚ್ಚಿನ ಮೊತ್ತ ಅಥವಾ ಹರಾಜಿನಲ್ಲಿ ಸೂಚಿಸಿರುವ ಅತಿ ಹೆಚ್ಚಿನ ಬಿಡ್ ಮೊತ್ತ ಈ ಎರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತವನ್ನು ಪ್ರಥಮ ವರ್ಷದ ಆದ್ಯರಾದ ಗುತ್ತಿಗೆ ಮೊತ್ತವೆಂದು ಪರಿಗಣಿಸತಕ್ಕದ್ದು.

3) ಪರವಾನಗಿ:–

ವೃತ್ತಿಪರ ಮೀನುಗಾರರಿಗೆ ಅಥವಾ ಕ್ರೀಡಾ ಮೀನುಗಾರರಿಗೆ ನಿರ್ದಿಷ್ಟ ಮೊತ್ತವನ್ನು ನಿಗಧಿಪಡಿಸಿ, ನಿಗಧಿತ ಜಲಸಂಪನ್ಮೂಲದಲ್ಲಿ, ನಿಗಧಿತ ಅವಧಿಗೆ ಪರವಾನಗಿ ಮೂಲಕ ಮೀನು ಹಿಡಿಯಲು ಅವಕಾಶ ನೀಡುವ ವಿಧಾನ. ರಾಜ್ಯದ ಆಯ್ದ ಜಲಾಶಯಗಳನ್ನು (ಈ ಆದೇಶದ ಅನುಬಂಧ–3ರಲ್ಲಿ ಪಟ್ಟಿ ಮಾಡಿರುವ ಜಲಾಶಯಗಳು), ಎಲ್ಲಾ ಅಳಿವೆಗಳನ್ನು ಮತ್ತು ಗುತ್ತಿಗೆಗೆ ಕೋರದ ನದಿ ಭಾಗಗಳನ್ನು ಮೀನುಗಾರರಿಗೆ ಪರವಾನಗಿ ನೀಡುವ ಮುಖಾಂತರ ಮಾತ್ರ ಮೀನುಗಾರಿಕೆ ಕೈಗೊಳ್ಳತಕ್ಕದ್ದು. ಪರವಾನಗಿ ಶುಲ್ಕಗಳನ್ನು ಕಂಡಿಕೆ–15ರಲ್ಲಿ ನಿಗಧಿಪಡಿಸಿರುವಂತೆ ವಿಧಿಸುವುದು.

ಕಂಡಿಕೆ–5:–

ವಿಶೇಷ ಕಾರಣಾಂತರಗಳಿಂದಾಗಿ, ಎಲ್ಲೆಲ್ಲಿ ಒಳನಾಡು ಕೆರೆಗಳ / ಜಲಾಶಯಗಳ ಮೀನು ಪಾಶುವಾರು ಹಕ್ಕನ್ನು ಮೀನುಗಾರಿಕೆ ಇಲಾಖೆಯಿಂದ ನೇರ ಗುತ್ತಿಗೆ ಮುಖಾಂತರವಾಗಲೀ ಅಥವಾ ಟೆಂಡರ್–ಕಂ–ಹರಾಜು ಮುಖಾಂತರವಾಗಲೀ ವಿಲೇವಾರಿ ಮಾಡಲು ಸಾಧ್ಯವಾಗದಿದ್ದ ಪಕ್ಷದಲ್ಲಿ, ಅಂತಹ ಜಲಸಂಪನ್ಮೂಲಗಳಲ್ಲಿನ ಮೀನು ಪಾಶುವಾರು ಹಕ್ಕನ್ನು ಮೀನುಗಾರಿಕೆ ನಿರ್ದೇಶಕರ ಅನುಮತಿಯ ಮೇರೆಗೆ ಸ್ಥಳೀಯ ಮೀನುಗಾರರಿಗೆ ಪರವಾನಗಿ ನೀಡುವ ಮುಖಾಂತರ ಮೀನುಗಾರಿಕೆಯನ್ನು ಕೈಗೊಳ್ಳತಕ್ಕದ್ದು.

ಕಂಡಿಕೆ–6:–

ಮೀನುಗಾರಿಕೆ ವರ್ಷ ಮತ್ತು ಗುತ್ತಿಗೆ ಅವಧಿ

ಪ್ರತಿ ವರ್ಷದ ಜುಲೈ 1 ರಿಂದ ಮುಂದಿನ ವರ್ಷದ ಜೂನ್ 30ರವರೆಗಿನ ಅವಧಿಯನ್ನು "ಮೀನುಗಾರಿಕೆ ವರ್ಷ" ವೆಂದು ಪರಿಗಣಿಸುವುದು. ಗುತ್ತಿಗೆ ಮುಖಾಂತರವಾಗಲಿ ಅಥವಾ ಟೆಂಡರ್ ಮತ್ತು ಹರಾಜು ಮುಖಾಂತರವಾಗಲಿ ನೀಡಲಾಗುವ ಮೀನು ಪಾಶುವಾರು ಹಕ್ಕಿನ ಗುತ್ತಿಗೆಯನ್ನು ಗರಿಷ್ಠ 5 ವರ್ಷಗಳಿಗೆ ನೀಡತಕ್ಕದ್ದು. ಆದರೆ, ವೃತ್ತಿಪರ ಮೀನುಗಾರರ ಪರವಾನಗಿಗಳು ಆ ವರ್ಷದ ಮೀನುಗಾರಿಕೆ ವರ್ಷಕ್ಕೆ ಸೀಮಿತಗೊಳ್ಳುತ್ತವೆ. ಮೀನುಗಾರಿಕಾ ವರ್ಷದ ಮಧ್ಯಂತರದ ಯಾವುದೇ ಅವಧಿಯಲ್ಲಿ ಗುತ್ತಿಗೆ/ಪರವಾನಗಿ ನೀಡಲಾಗಿದ್ದರೂ ಸಹ, ಮೀನುಗಾರಿಕೆ ವರ್ಷದ ಅಂತ್ಯದಲ್ಲಿ ಗುತ್ತಿಗೆಯು ಕೊನೆಗೊಳ್ಳುತ್ತದೆ.

ಕಂಡಿಕೆ–7:–

ಉಪಯುಕ್ತತಾ ಜಲವಿಸ್ತೀರ್ಣ ಪ್ರದೇಶ ಮತ್ತು ಗುತ್ತಿಗೆ ಮೊತ್ತದ ನಿಗಧಿ

(ಅ) ಹೊಸದಾಗಿ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ನೀಡಲಾಗುವ ಜಲಸಂಪನ್ಮೂಲದ ಒಟ್ಟು ಜಲ ವಿಸ್ತೀರ್ಣದ ಶೇಕಡ 50ರಷ್ಟು ಜಲವಿಸ್ತೀರ್ಣವನ್ನು ಉಪಯುಕ್ತತಾ ಜಲವಿಸ್ತೀರ್ಣ ಪ್ರದೇಶವೆಂದು (ಇಜಿಜೆಜಳಿಣುತಿಜ ಫಾಜಿಣಜಿಡಿ ಮಿಂಖಿಜಜಿಜ ಂಡಿಜಚಿ) ಗಣನೆಗೆ ತೆಗೆದುಕೊಂಡು, ಈ ರೀತಿ ಗಣನೆಗೆ ತೆಗೆದುಕೊಂಡ ಉಪಯುಕ್ತತಾ ಜಲವಿಸ್ತೀರ್ಣಕ್ಕೆ ಮೊದಲನೇ ವರ್ಷ ಪ್ರತಿ ಹೆಕ್ಟೇರಿಗೆ ರೂ.500–00ರಂತೆ (ರೂಪಾಯಿ ಐದು ನೂರು ಮಾತ್ರ) ಬರುವ ಮೊತ್ತ ಅಥವಾ ಹಿಂದಿನ ಮೂರು ವರ್ಷಗಳ ಸರಾಸರಿ ಆದಾಯ ಇವೆರಡರಲ್ಲಿ ಯಾವುದು ಹೆಚ್ಚೋ ಅದನ್ನು ಪ್ರಥಮ ವರ್ಷದ ಗುತ್ತಿಗೆ ಮೊತ್ತವೆಂದು ನಿಗದಿಪಡಿಸತಕ್ಕದ್ದು. ಈ ರೀತಿ ನಿಗದಿಪಡಿಸಿದ ಗುತ್ತಿಗೆ ಮೊತ್ತಕ್ಕೆ ಉಳಿದ 4 ವರ್ಷಗಳ ಗುತ್ತಿಗೆ ಅವಧಿಯಲ್ಲಿ ಪ್ರತಿ ವರ್ಷ ಹಿಂದಿನ ವರ್ಷದ ಗುತ್ತಿಗೆ ಮೊತ್ತಕ್ಕೆ ಶೇ.5ರಷ್ಟು ಹೆಚ್ಚಿಸಿ ಗುತ್ತಿಗೆ ಮೊತ್ತವನ್ನು ನಿಗದಿಪಡಿಸತಕ್ಕದ್ದು.

(ಆ) ನದಿಗಳನ್ನು ಗುತ್ತಿಗೆ ನೀಡುವ ಪ್ರತಿ ಕಿ.ಮೀ. ಉದ್ದದ ಭಾಗಕ್ಕೆ ರೂ.500.00ರಂತೆ ಮೊದಲನೇ ವರ್ಷದ ಗುತ್ತಿಗೆ ಮೊತ್ತವನ್ನು ನಿಗಧಿಪಡಿಸುವುದು. ಉಳಿದ 4 ವರ್ಷಗಳ ಗುತ್ತಿಗೆ ಅವಧಿಯಲ್ಲಿ ಪ್ರತಿ ವರ್ಷ ಹಿಂದಿನ ವರ್ಷದ ಗುತ್ತಿಗೆ ಮೊತ್ತಕ್ಕೆ ಶೇ.5ರಷ್ಟು ಹೆಚ್ಚಿಸಿ ಗುತ್ತಿಗೆ ಮೊತ್ತವನ್ನು ನಿಗಧಿಪಡಿಸತಕ್ಕದ್ದು. ನದಿ ಭಾಗಗಳನ್ನು ಮೀನುಗಾರರ ಸಹಕಾರ ಸಂಘಗಳಿಗೆ ಕಂಡಿಕೆ–10ರಲ್ಲಿ ನಮೂದಿಸಿರುವ ಗುತ್ತಿಗೆ ನೀಡುವ ಪ್ರಾಧಿಕಾರಗಳು ಗುತ್ತಿಗೆ ನೀಡುವುದು. ಆದರೆ ವಿಶೇಷವಾದ ವನ್ಯಜೀವಿ ಸಂರಕ್ಷಣಾ ಸಂಘಗಳಿಗೆ ಗುತ್ತಿಗೆ ನೀಡುವ ಅಧಿಕಾರ ಮೀನುಗಾರಿಕೆ ನಿರ್ದೇಶಕರಿಗೆ ಮಾತ್ರ ಪ್ರದತ್ತವಾಗಿರುತ್ತದೆ.

(ಇ) ಈ ರೀತಿಯಾಗಿ ನೀಡಲಾದ 5 ವರ್ಷಗಳ ಪ್ರಥಮ ಗುತ್ತಿಗೆ ಅವಧಿಯು (ಮೊದಲನೇ ಬ್ಲಾಕ್) ಮುಗಿದನಂತರ ಸದರಿ ಜಲಸಂಪನ್ಮೂಲಕ್ಕೆ ಸಂಬಂಧಿಸಿದಂತೆ ಹೊಸದಾಗಿ 5 ವರ್ಷಗಳ ಎರಡನೇ ಗುತ್ತಿಗೆ ಅವಧಿಗೆ (ಎರಡನೇ ಬ್ಲಾಕ್) ಪ್ರಸ್ತಾವನೆಯನ್ನು ಸಲ್ಲಿಸುವ ಸಮಯದಲ್ಲಿ ಪುನ: ಆ ಜಲಸಂಪನ್ಮೂಲದ ಒಟ್ಟು ಜಲವಿಸ್ತೀರ್ಣದ ಶೇ.50ರಷ್ಟನ್ನು ಉಪಯುಕ್ತತಾ ಜಲವಿಸ್ತೀರ್ಣವೆಂದು ಗಣನೆಗೆ ತೆಗೆದುಕೊಂಡು ಆ ರೀತಿ ಗಣನೆಗೆ ತೆಗೆದುಕೊಂಡ ಜಲವಿಸ್ತೀರ್ಣದ ಪ್ರತಿ ಹೆಕ್ಟೇರಿಗೆ ರೂ.500-00ರಂತೆ ಮತ್ತು ನದಿ ಭಾಗಕ್ಕೆ ಪ್ರತಿ ಕಿ.ಮೀ.ಗೆ ರೂ.500.00ರಂತೆ ಅಥವಾ ಹಿಂದಿನ ಮೂರು ವರ್ಷಗಳ ಸರಾಸರಿ ಆದಾಯ ಇವೆರಡರಲ್ಲಿ ಯಾವುದು ಹೆಚ್ಚೋ ಅದನ್ನು ಗುತ್ತಿಗೆ ಮೊತ್ತವೆಂದು ನಿಗದಿಪಡಿಸತಕ್ಕದ್ದು. ಈ ರೀತಿ ನಿಗದಿಪಡಿಸಿದ ಗುತ್ತಿಗೆ ಮೊತ್ತಕ್ಕೆ ಆ ಬ್ಲಾಕ್‌ನ ಉಳಿದ 4 ವರ್ಷಗಳ ಗುತ್ತಿಗೆ ಅವಧಿಯಲ್ಲಿ ಪ್ರತಿವರ್ಷ ಹಿಂದಿನ ವರ್ಷದ ಗುತ್ತಿಗೆ ಮೊತ್ತಕ್ಕೆ ಶೇ.5ರಷ್ಟು ಹೆಚ್ಚಿಸಿ ಗುತ್ತಿಗೆ ಮೊತ್ತವನ್ನು ನಿಗದಿಪಡಿಸತಕ್ಕದ್ದು. ಇದೇ ರೀತಿ ಮುಂದಿನ ಮೂರು ಮತ್ತು ನಂತರದ ಬ್ಲಾಕ್‌ಗಳಿಗೆ ಗುತ್ತಿಗೆ ಮೊತ್ತ ನಿಗಧಿಪಡಿಸುವುದು.

ಕಂಡಿಕೆ-8:-

ಮೀನುಗಾರಿಕೆ ನಿಷೇಧ

ಮುಂಗಾರು ಮಳೆಗಾಲದ ಅವಧಿಯಲ್ಲಿ ಮೀನುಗಳ ವಂಶಾಭಿವೃದ್ಧಿ ಚಟುವಟಿಕೆಗಳು ನಡೆಯುವುದರಿಂದ ಪ್ರತಿ ವರ್ಷದ ಜೂನ್ 01 ರಿಂದ ಜುಲೈ 30ರವರೆಗೆ ರಾಜ್ಯದ ಎಲ್ಲಾ ಸರ್ವಋತು ಕೆರೆಗಳು, ಜಲಾಶಯಗಳು, ತೊರೆಗಳು, ಅಳಿವೆಗಳು ಮತ್ತು ನದಿಗಳಲ್ಲಿ ಮೀನು ಹಿಡಿಯುವುದನ್ನು ಪೂರ್ಣವಾಗಿ ನಿಷೇಧಿಸಲಾಗಿರುತ್ತದೆ.

ಕಂಡಿಕೆ-9:-

ಜಲಾಶಯಗಳಲ್ಲಿ "ಪಂಜರದಲ್ಲಿ ಮೀನು ಕೃಷಿ"

ರಾಜ್ಯದಲ್ಲಿರುವ ಆಯ್ದ ಜಲಾಶಯಗಳಲ್ಲಿ ಸೂಕ್ತ ಸ್ಥಳಗಳನ್ನು ಗುರುತಿಸಿ ಆ ಸ್ಥಳಗಳಲ್ಲಿ "ಪಂಜರದಲ್ಲಿ ಮೀನು ಕೃಷಿ" ಕೈಗೊಳ್ಳಲು ಇಲಾಖೆಯಿಂದ ಕ್ರಮಕೈಗೊಳ್ಳುವುದು ಅಥವಾ ಸಮರ್ಥ ಉದ್ಯಮಿಗಳಿಂದ/ಸಹಕಾರ ಸಂಘ/ಸಂಸ್ಥೆಗಳಿಗೆ ಪಾರದರ್ಶಕ ನಿಯಮಗಳನ್ನು ಪಾಲಿಸಿಕೊಂಡು ಗುತ್ತಿಗೆ ಮೂಲಕ ಸ್ಥಳವನ್ನು ಹಂಚಿಕೆ ಮಾಡುವುದು. ಜಲಾಶಯಗಳಲ್ಲಿ ಜಲವಿಸ್ತೀರ್ಣದ ಗರಿಷ್ಠ ಶೇಕಡ 10ರ ಭಾಗದಲ್ಲಿ "ಪಂಜರಗಳಲ್ಲಿ ಮೀನು ಕೃಷಿ" ಕೈಗೊಳ್ಳುವುದು. ಗುತ್ತಿಗೆ ನೀಡುವುದಾದಲ್ಲಿ ಗರಿಷ್ಠ 10 (ಹತ್ತು) ವರ್ಷಗಳ ಅವಧಿಗೆ ನೀಡತಕ್ಕದ್ದು. ಪ್ರತಿ ಘಟಕಕ್ಕೆ 0.25 ಹೆಕ್ಟೇರ್ ಜಲವಿಸ್ತೀರ್ಣವನ್ನು ಗುತ್ತಿಗೆ ನೀಡಬಹುದು. ಹಾಗೂ ಪ್ರತಿ ಘಟಕಕ್ಕೆ ಕನಿಷ್ಠ ರೂ.10,000/-ಗಳ ಗುತ್ತಿಗೆ ಮೊತ್ತವನ್ನು ನಿಗಧಿಗೊಳಿಸುವುದು. ಈ ರೀತಿ ವಿಲೇವಾರಿ ಮಾಡಿದ ನಂತರ ಉಳಿದ 9 ವರ್ಷಗಳಿಗೆ ಹಿಂದಿನ ವರ್ಷದ ಗುತ್ತಿಗೆ ಮೊತ್ತಕ್ಕೆ ಶೇಕಡ 5ರಷ್ಟು ಗುತ್ತಿಗೆ ಮೊತ್ತವನ್ನು ಹೆಚ್ಚಿಸುವುದು. ಒಬ್ಬ ಫಲಾನುಭವಿಗೆ ಒಂದು ಜಲಾಶಯದಲ್ಲಿ ಗರಿಷ್ಠ 4 ಘಟಕಗಳನ್ನು ಮಾತ್ರ ಗುತ್ತಿಗೆ ನೀಡುವುದು.

ಈ ಯೋಜನೆಯ ಅನುಷ್ಠಾನಕ್ಕೆ ಸೂಕ್ತ ಜಲಾಶಯಗಳನ್ನು ಮತ್ತು ಸ್ಥಳಗಳನ್ನು ಆಯ್ಕೆ ಮಾಡಲು ಹಾಗೂ ತತ್ಸಂಬಂಧ ಮಾರ್ಗಸೂಚಿಗಳನ್ನು ರೂಪಿಸಲು ಮೀನುಗಾರಿಕೆ ನಿರ್ದೇಶಕರವರ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸುವುದು. ಈ ಸಮಿತಿಯು ಗುತ್ತಿಗೆ ಪಡೆಯಲು ಮುಂದೆ ಬರುವ ಅರ್ಜಿದಾರರನ್ನು ಪಾರದರ್ಶಕ ನಿಯಮಾನುಸಾರ ಆಯ್ಕೆ ಮಾಡಲು ಅಧಿಕಾರಯುಕ್ತ ಸಮಿತಿಯಾಗಿರುತ್ತದೆ.

ಕಂಡಿಕೆ-10:-

ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡುವ ಸಂಬಂಧ ಅಧಿಕಾರ ವಿಕೇಂದ್ರೀಕರಣ

1. ನೇರ ಗುತ್ತಿಗೆ ಪ್ರಸ್ತಾವನೆಗಳು

| ಗುತ್ತಿಗೆ ನೀಡುವ ಪ್ರಾಧಿಕಾರ | ಅಧಿಕಾರದ ಮಿತಿ (ವಾರ್ಷಿಕ ಗುತ್ತಿಗೆ ಮೊತ್ತ) |
|---|---|
| ಮೀನುಗಾರಿಕೆ ನಿರ್ದೇಶಕರು | ಪೂರ್ಣಾಧಿಕಾರ |
| ಮೀನುಗಾರಿಕೆ ಜಂಟಿ ನಿರ್ದೇಶಕರು | ರೂ. 1,00,000.00 ರವರೆಗೆ |
| ಮೀನುಗಾರಿಕೆ ಉಪನಿರ್ದೇಶಕರು | ರೂ. 50,000.00 ರವರೆಗೆ |
| ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ | ರೂ. 25,000.00 ರವರೆಗೆ |

2. ಟೆಂಡರ್-ಕಂ-ಹರಾಜು ಪ್ರಸ್ತಾವನೆಗಳು

| ದೃಢೀಕರಿಸುವ ಪ್ರಾಧಿಕಾರ | ಅಧಿಕಾರದ ಮಿತಿ (ವಾರ್ಷಿಕ ಗುತ್ತಿಗೆ ಮೊತ್ತ) |
|---|---|
| ಮೀನುಗಾರಿಕೆ ನಿರ್ದೇಶಕರು | ಪೂರ್ಣಾಧಿಕಾರ |
| ಮೀನುಗಾರಿಕೆ ಜಂಟಿನಿರ್ದೇಶಕರು | ರೂ. 1,50,000.00ರವರೆಗೆ |
| ಮೀನುಗಾರಿಕೆ ಉಪನಿರ್ದೇಶಕರು | ರೂ. 1,00,000.00ರವರೆಗೆ |
| ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ | ರೂ. 50,000.00ರವರೆಗೆ |

ಕಂಡಿಕೆ-11:-

ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಪಟ್ಟಂತೆ ತಾಲ್ಲೂಕು ಮೀನುಗಾರಿಕೆ ಅಧಿಕಾರಿಗಳು ಕಡ್ಡಾಯವಾಗಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಮಾರ್ಗಸೂಚಿಗಳು

ಮೀನು ಪಾಶುವಾರು ಹಕ್ಕನ್ನು ಮೀನುಗಾರಿಕೆ ಇಲಾಖೆ ಮುಖಾಂತರ ನೇರ ಗುತ್ತಿಗೆ ಆಧಾರದ ಮೇರೆಗೆ, ಅಥವಾ ಟೆಂಡರ್-ಕಂ-ಹರಾಜು ಮೂಲಕ ಅಥವಾ ಪರವಾನಗಿ ಮೂಲಕ ವಿಲೇವಾರಿ ಮಾಡುವಾಗ ಅನುಕ್ರಮವಾಗಿ ಈ ಆದೇಶದ ಅನುಬಂಧ-4, ಅನುಬಂಧ-5 ಮತ್ತು ಅನುಬಂಧ-6ರಲ್ಲಿ ನಮೂದಿಸಲಾಗಿರುವ ವಿಧಿವಿಧಾನಗಳನ್ನು ಮತ್ತು ಮಾರ್ಗಸೂಚಿಗಳನ್ನು ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿಗಳು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಕಂಡಿಕೆ–12:–

ವಿಲೇವಾರಿ ವಿನಾಯಿತಿ

(ಆ) ಅನಾವೃಷ್ಟಿಯಿಂದ ಒಳನಾಡು ಜಲಸಂಪನ್ಮೂಲಗಳಲ್ಲಿ ಸಾಕಷ್ಟು ನೀರು ಸಂಗ್ರಹಣೆಯಾಗದಿರುವುದು. ಅತಿವೃಷ್ಟಿಯಿಂದ ಕೆರೆಕಟ್ಟೆ ಒಡೆದುಹೋಗಿ ನೀರು ಸಂಪೂರ್ಣವಾಗಿ ಸೋರಿ ಹೋಗುವುದು. ಕೆರೆಗಳ ದುರಸ್ತಿ ಕೈಗೊಂಡಿರುವುದು. ಮುಂತಾದ ಇತರೆ ಕಾರಣಗಳಿಂದಾಗಿ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡಲು ಸಾಧ್ಯವಾಗದೇ ಇರುವ ಸಂದರ್ಭಗಳಲ್ಲಿ ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿಗಳು ಅಂತಹ ಜಲಸಂಪನ್ಮೂಲಗಳಿಗೆ ಸಂಬಂಧಪಟ್ಟಂತೆ ವಿಲೇವಾರಿ ವಿನಾಯಿತಿ ಕೋರಿ ಪ್ರಸ್ತಾವನೆಗಳನ್ನು ಆಯಾ ಮೀನುಗಾರಿಕೆ ಫಸಲಿ ವರ್ಷದ ಡಿಸೆಂಬರ್ ಮಾಹೆಯ ಅಂತ್ಯದೊಳಗಾಗಿ ಮೇಲಾಧಿಕಾರಿಗಳ ಮುಖಾಂತರ ಮೀನುಗಾರಿಕೆ ನಿರ್ದೇಶಕರಿಗೆ ಸಲ್ಲಿಸಿ ವಿಲೇವಾರಿ ವಿನಾಯಿತಿ ಆದೇಶಗಳನ್ನು ಪಡೆದುಕೊಳ್ಳತಕ್ಕದ್ದು. ವಿಲೇವಾರಿ ವಿನಾಯಿತಿ ನೀಡುವ ಅಧಿಕಾರ ಮೀನುಗಾರಿಕೆ ನಿರ್ದೇಶಕರಿಗೆ ಪ್ರದತ್ತವಾಗಿರುತ್ತದೆ. ಇಂತಹ ಪ್ರಕರಣಗಳಲ್ಲಿ ಈ ಆದೇಶದ ಅನುಬಂಧ–7ರಲ್ಲಿ ನಮೂದಿಸಿರುವಂತೆ ತಾಲ್ಲೂಕು ಮಟ್ಟದ ಅಥವಾ ಜಿಲ್ಲಾ ಮಟ್ಟದ ಮೀನುಗಾರಿಕೆ ಅಧಿಕಾರಿಗಳು ಸ್ಥಳ ಪರಿಶೀಲನೆ ನಡೆಸಿ ಛಾಯಾಚಿತ್ರದೊಂದಿಗೆ ಮಹಜರು ಮಾಡಿರತಕ್ಕದ್ದು. ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕು ವಿಲೇವಾರಿಯಾಗದೆ ಅಥವಾ ವಿಲೇವಾರಿ ವಿನಾಯಿತಿ ಪಡೆಯದೆ ಸರ್ಕಾರಕ್ಕೆ ಉಂಟಾಗುವ ಆರ್ಥಿಕ ನಷ್ಟಕ್ಕೆ ಹಾಗೂ ಇಂತಹ ಪ್ರಕರಣಗಳಲ್ಲಿ ಸೂಚಿಸಿರುವ ಮಾರ್ಗಸೂಚಿಗಳನ್ನು ಮತ್ತು ನಿಯಮಗಳನ್ನು ಪಾಲಿಸದೇ ಇದ್ದಲ್ಲಿ ಸಂಬಂಧಪಟ್ಟ ತಾಲ್ಲೂಕು ಮಟ್ಟದ ಮತ್ತು ಜಿಲ್ಲಾ ಮಟ್ಟದ ಮೀನುಗಾರಿಕೆ ಅಧಿಕಾರಿಗಳನ್ನು ಜಂಟಿ ಹೊಣೆಗಾರರನ್ನಾಗಿ ಮಾಡಿ ಶಿಸ್ತು ಕ್ರಮಕ್ಕೆ ಒಳಪಡಿಸಲಾಗುವುದು.

ಕಂಡಿಕೆ–13:–

ಮೇಲ್ಮನವಿ ಪ್ರಾಧಿಕಾರಗಳು

ರಾಜ್ಯದ ಒಳನಾಡು ಜಲಸಂಪನ್ಮೂಲಗಳ ವಿಲೇವಾರಿಯಲ್ಲಿ ಅನ್ಯಾಯವಾಗಿದ್ದಲ್ಲಿ ಅಥವಾ ನಿಯಮಬಾಹಿರವಾಗಿ ಗುತ್ತಿಗೆ ಅಥವಾ ಟೆಂಡರ್–ಕಂ–ಹರಾಜು ಪ್ರಕ್ರಿಯೆ ಮಾಡಿದ್ದಲ್ಲಿ ಗುತ್ತಿಗೆದಾರರು ಅಥವಾ ಟೆಂಡರುದಾರರು / ಹರಾಜುದಾರರು ತಮ್ಮ ದೂರುಗಳನ್ನು ಈ ಕೆಳಕಂಡ ಮೇಲ್ಮನವಿ ಪ್ರಾಧಿಕಾರಗಳಿಗೆ ಸಲ್ಲಿಸುವುದು.

| ಗುತ್ತಿಗೆ ನೀಡಿರುವ ಪ್ರಾಧಿಕಾರ | ಮೇಲ್ಮನವಿ ಸಲ್ಲಿಸಬೇಕಾದ ಪ್ರಾಧಿಕಾರ |
|---|---|
| ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು | ಮೀನುಗಾರಿಕೆ ಉಪ ನಿರ್ದೇಶಕರು |
| ಮೀನುಗಾರಿಕೆ ಉಪ ನಿರ್ದೇಶಕರು | ಮೀನುಗಾರಿಕೆ ನಿರ್ದೇಶಕರು |
| ಮೀನುಗಾರಿಕೆ ನಿರ್ದೇಶಕರು | ಸರ್ಕಾರ |

ಕಂಡಿಕೆ–14:–

**ಗ್ರಾಮ ಪಂಚಾಯತಿಗಳ ವ್ಯಾಪ್ತಿಯ ಒಳನಾಡು ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡುವ ಸಂಬಂಧ ಗ್ರಾಮ ಪಂಚಾಯತ್‌ಗಳಿಗೆ ಅನ್ವಯವಾಗುವ ಮಾರ್ಗಸೂಚಿಗಳು :**

ಗ್ರಾಮಪಂಚಾಯತ್‌ಗಳ ವ್ಯಾಪ್ತಿಯ (40 ಹೆಕ್ಟೇರ್ ಮತ್ತು ಅದಕ್ಕಿಂತ ಕಡಿಮೆ ಅಚ್ಚುಕಟ್ಟು ಪ್ರದೇಶದವರೆಗೆ ಒಳಪಡುವ) ಕೆರೆಗಳ ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡುವ ಸಂಬಂಧ ಗ್ರಾಮ ಪಂಚಾಯತಿಗಳಿಗೆ ಅನ್ವಯವಾಗುವ ಮಾರ್ಗಸೂಚಿಗಳು.

(1) ಮೀನು ಪಾಶುವಾರು ಹಕ್ಕಿನ ವಿಲೇವಾರಿಗಾಗಿ ಮೀನುಗಾರಿಕೆ ಫಸಲಿ ವರ್ಷವು ಜುಲೈ 1 ರಿಂದ ಮರು ವರ್ಷದ ಜೂನ್ 30ರವರೆಗೆ ಇರುವುದು.

(2) ಮೀನು ಕೃಷಿ ಮಾಡಲು ಗ್ರಾಮ ಪಂಚಾಯತ್‌ಗಳು ಮೀನುಗಾರಿಕೆ ಇಲಾಖೆಯಿಂದ ತಾಂತ್ರಿಕ ಸಲಹೆ, ಸಹಕಾರ ಮತ್ತು ಮಾರ್ಗದರ್ಶನ ಪಡೆಯುವುದು.

(3) ಗ್ರಾಮ ಪಂಚಾಯತ್‌ಗಳ ವ್ಯಾಪ್ತಿಗೆ ಬರುವ ಕೆರೆಗಳಲ್ಲಿ ಮೀನುಗಾರಿಕೆಯನ್ನು ಗ್ರಾಮ ಪಂಚಾಯತ್‌ಗಳೇ ಸ್ಥಳೀಯ ಮೀನುಗಾರರ ಮುಖಾಂತರ ಅಭಿವೃದ್ಧಿಪಡಿಸುವುದು ಅಥವಾ ಸ್ಥಳೀಯ ಮೀನುಗಾರಿಕೆ ಸಹಕಾರ ಸಂಘಗಳ ಮೂಲಕ ಅಭಿವೃದ್ಧಿಪಡಿಸುವುದು. ಇಲ್ಲವಾದಲ್ಲಿ, ಬಹಿರಂಗವಾಗಿ ಟೆಂಡರ್–ಕಂ–ಹರಾಜು ಮೂಲಕ ವಿಲೇವಾರಿ ಮಾಡುವುದು. ಯಶಸ್ವಿ ಟೆಂಡರುದಾರರು / ಬಿಡ್‌ದಾರರು ಮೀನುಗಾರಿಕೆಯಲ್ಲಿ ತರಬೇತಿ ಪಡೆದು ಮೀನು ಕೃಷಿ ಬಗ್ಗೆ ತಾಂತ್ರಿಕ ಜ್ಞಾನ ಮತ್ತು ಸರ್ಕಾರದಿಂದ ದೊರೆಯುವ ಸೌಲಭ್ಯಗಳನ್ನು ಪಡೆಯಬಹುದು.

(4) ವಿಲೇ ಮಾಡಿದ ಮೀನು ಪಾಶುವಾರು ಹಕ್ಕನ್ನು ಸಂಬಂಧಪಟ್ಟ ಗ್ರಾಮ ಪಂಚಾಯತ್‌ಗಳೇ ದೃಢೀಕರಿಸುವುದು.

(5) ಗ್ರಾಮ ಪಂಚಾಯತ್‌ಗಳು ಮತ್ತು ಬಹಿರಂಗವಾಗಿ ಟೆಂಡರ್–ಕಂ–ಹರಾಜು ಮೂಲಕ ಗುತ್ತಿಗೆಗೆ ಪಡೆದವರು ಸ್ಥಳೀಯ ಮೀನುಗಾರಿಕೆ ಅಧಿಕಾರಿಗಳ ಶಿಫಾರಸ್ಸಿನಂತೆ ಮೀನುಗಾರಿಕೆ ಇಲಾಖೆಯಿಂದಲೇ ಅಥವಾ ಮೀನುಗಾರಿಕೆ ಇಲಾಖೆಯಿಂದ ಅಂಗೀಕೃತಗೊಂಡ ಖಾಸಗಿ ಮೀನುಮರಿ ಉತ್ಪಾದನಾ / ಪಾಲನಾ ಕೇಂದ್ರಗಳಿಂದ ಮೀನುಮರಿಗಳನ್ನು ಖರೀದಿಸಿ ಕೆರೆಗಳಲ್ಲಿ ಬಿತ್ತನೆ ಮಾಡುವುದು.

(6) ನಿಷೇಧಿತ ಮೀನು ತಳಿಗಳಾದ ವಿದೇಶಿ ಕ್ಯಾಟ್ ಫಿಶ್‌ಗಳಾದ ಆಫ್ರಿಕನ್ ಕ್ಯಾಟ್ ಫಿಶ್ (ಆಣೆ ಮೀನು) ಮತ್ತು ಚೈನೀಸ್ ಬಿಗ್ ಹೆಡ್ (ಅರಿಸ್ಟಿಕ್ತೀಸ್ ನೊಬಿಲಿಸ್), ಇತ್ಯಾದಿ ತಳಿಯ ಮೀನುಮರಿಗಳನ್ನು ಮತ್ತು ಸ್ಥಳೀಯ ಮೀನು ಸಂತತಿಯ ನಾಶಕ್ಕೆ ಕಾರಣವಾಗುವ ಮೀನು ತಳಿಗಳನ್ನು ಯಾವುದೇ ಕಾರಣಕ್ಕೂ ಕೆರೆಗಳಿಗೆ ಬಿತ್ತನೆ ಮಾಡತಕ್ಕದ್ದಲ್ಲ.

(7) ಕೆರೆಗಳಲ್ಲಿ ಸಿಡಿಮದ್ದು ಮತ್ತು ವಿಷ ಪ್ರಯೋಗ ಮಾಡಿ ಮೀನು ಹಿಡಿಯುವುದನ್ನು ನಿಷೇಧಿಸತಕ್ಕದ್ದು.

(8) ಗ್ರಾಮ ಪಂಚಾಯತ್‌ಗಳು ಅಥವಾ ಕೆರೆಗಳ ಮೀನು ಪಾಶುವಾರು ಹಕ್ಕನ್ನು ಪಡೆದವರು, ಗಳಿಸಿದ ಆದಾಯ, ಕೆರೆಗಳಿಗೆ ದಾಸ್ತಾನು ಮಾಡಿದ ಮೀನುಮರಿಗಳ ವಿವರ ಮತ್ತು ಮೀನು ಹಿಡುವಳಿ ಮಾಡಿದ ಅಂಕಿ ಅಂಶಗಳನ್ನು ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿಗಳಿಗೆ ಪ್ರತಿ ತಿಂಗಳ ಮೊದಲನೇ ವಾರದೊಳಗಾಗಿ ಒಪ್ಪಿಸುವುದು.

(9) ಕೆರೆಗಳ ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡಿದ ಬಗ್ಗೆ, ಗಳಿಸಿದ ಆದಾಯದ ಬಗ್ಗೆ ಮತ್ತು ಉದ್ಯೋಗಾವಕಾಶದ ವಿವರಗಳನ್ನು ಸಂಬಂಧಪಟ್ಟ ಗ್ರಾಮ ಪಂಚಾಯತ್‌ಗಳು ಪ್ರತಿ ತಿಂಗಳು ಮೊದಲನೆಯ ವಾರದೊಳಗೆ ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿಗಳಿಗೆ ತಪ್ಪದೇ ಕಳುಹಿಸುವುದು.

(10) ಗ್ರಾಮ ಪಂಚಾಯತ್ ವ್ಯಾಪ್ತಿಗೆ ಬರುವ ಎಲ್ಲಾ ಕೆರೆಗಳಲ್ಲಿ ವೈಜ್ಞಾನಿಕವಾಗಿ ಮೀನು ಕೃಷಿ ಕೈಗೊಂಡು ಅಧಿಕ ಮೀನು ಉತ್ಪತ್ತಿ ಮಾಡಿ ಹೆಚ್ಚಿನ ಆದಾಯ ಪಡೆಯಲು ಕಾಲಕಾಲಕ್ಕೆ ತಾಲ್ಲೂಕು ಮಟ್ಟದ ಮೀನುಗಾರಿಕೆ ಇಲಾಖೆಯ ಅಧಿಕಾರಿಗಳು ಸಂಬಂಧಪಟ್ಟ ಗ್ರಾಮ ಪಂಚಾಯತಿಗಳಿಗೆ ಭೇಟಿ ನೀಡಿ ಸಲಹೆ ಮತ್ತು ಮಾರ್ಗದರ್ಶನ ನೀಡುವುದು. ಮತ್ತು ಗ್ರಾಮ ಪಂಚಾಯತಿಗಳು ಮತ್ತು ಕೆರೆಗಳು ಪಡೆದವರೂ ಸಹ ಮೀನುಗಾರಿಕೆ ಇಲಾಖಾಧಿಕಾರಿಗಳ ಮಾರ್ಗದರ್ಶನ ಪಾಲಿಸುವುದು.

11) ಸರ್ಕಾರದ ವಿಶೇಷ ಯೋಜನೆಗಳಡಿ (ವಿಶೇಷ ಘಟಕ ಯೋಜನೆಯಡಿ ಮತ್ತು ಗಿರಿಜನ ಉಪಯೋಜನೆಯಡಿ) ಗುರುತಿಸಿದ ಫಲಾನುಭವಿಗಳಿಗೆ ಕೆರೆಗಳನ್ನು ಆದ್ಯತೆಯ ಮೇರೆಗೆ ಐದು ವರ್ಷಗಳವರೆಗೆ ಗ್ರಾಮ ಪಂಚಾಯತಿಯವರು ಗುತ್ತಿಗೆ ನೀಡುವುದು.

12) ಮೀನುಗಾರರ ಸಹಕಾರ ಸಂಘ / ಜಲಸಂವರ್ಧನೆ ಯೋಜನೆಯಡಿ ನೋಂದಾಯಿಸಿದ ಸಂಘ ಸಂಸ್ಥೆಗಳಿಂದ ಬೇಡಿಕೆ ಬಂದಲ್ಲಿ, ಆದ್ಯತೆಯ ಮೇರೆಗೆ ಕೆರೆಗಳ ಗುತ್ತಿಗೆ ನೀಡುವುದು.

13) ಈ ಆದೇಶದಲ್ಲಿ ತಿಳಿಸದೇ ಇರುವ ವಿಷಯಗಳಿಗೆ ಸಂಬಂಧಿಸಿದಂತೆ ಸರ್ಕಾರದಿಂದ ಹಾಗೂ ಮೀನುಗಾರಿಕೆ ಇಲಾಖೆಯಿಂದ ಕಾಲಕಾಲಕ್ಕೆ ಹೊರಡಿಸಲಾದ / ಹೊರಡಿಸಿರುವ ಆದೇಶಗಳನ್ನು / ಸೂಚನೆಗಳನ್ನು ಯಥಾವತ್ತಾಗಿ ಅಳವಡಿಸಿಕೊಳ್ಳತಕ್ಕದ್ದು.

ಕಂಡಿಕೆ–15:–

ಒಳನಾಡು ಜಲಸಂಪನ್ಮೂಲಗಳಲ್ಲಿ ಮೀನು ಹಿಡುವಳಿಗೆ ಮೀನುಗಾರಿಕೆ ಇಲಾಖೆಯಿಂದ ನಿಗದಿಗೊಳಿಸಿರುವ ಪರವಾನಿಗೆ ಶುಲ್ಕಗಳು.

| ಕ್ರ ಸಂ. | ವಿವಿಧ ಮೀನು ಶಿಕಾರಿ ಪ್ರಾಕಾರಗಳ ವಿವರ | ಪರವಾನಿಗೆ ಶುಲ್ಕ | | ಷರಾ |
|---|---|---|---|---|
| | | ಜಲಾಶಯ / ಕೆರೆಗಳಿಗೆ | ನದಿಗಳಿಗೆ / ಅಳಿವೆಗಳಿಗೆ | |
| 1 | 2½" ಮೇಲ್ಪಟ್ಟು ಕಣ್ಣಳತೆಯ ಗಿಲ್‌ನೆಟ್ ಮೂಲಕ ಹರಿಗೋಲು ಬಳಸಿ ಇಬ್ಬರು ಮೀನು ಗಾರರು ಸೇರಿ ಮೀನು ಶಿಕಾರಿ ಮಾಡುವುದು. | ಮೊದಲ 300ಮೀ.ವರೆಗಿನ ಉದ್ದಕ್ಕೆ ರೂ.3000/– ಮತ್ತು ನಂತರದ ಪ್ರತಿ 100 ಮೀ. ಉದ್ದದ ಬಲೆಗೆ ರೂ.500/– ರಂತೆ ಗರಿಷ್ಠ ಹೆಚ್ಚುವರಿ 200 ಮೀ. ವರೆಗೆ ಮಾತ್ರ | ಮೊದಲ 200 ಮೀ. ಉದ್ದಕ್ಕೆ ರೂ.1500/– ನಂತರ ಪ್ರತಿ 100 ಮೀ. ಉದ್ದದ ಬಲೆಗೆ ರೂ. 300/– ರಂತೆ ಗರಿಷ್ಠ ಹೆಚ್ಚುವರಿ 200 ಮೀ. ವರೆಗೆ ಮಾತ್ರ | – |
| 2 | 2½" ಮೇಲ್ಪಟ್ಟು ಕಣ್ಣಳ ತೆಯ ಪ್ರತಿ ಬಿಡುಬಲೆ (ಗಿಲ್‌ನೆಟ್) ಮೂಲಕ ಒಬ್ಬ ಮೀನುಗಾರ ತೇಲು ಬುರುಡೆ / ಫ್ಲೋಟ್ ಬಳಸಿ ಮೀನು ಶಿಕಾರಿ ಮಾಡುವುದು. | ಮೊದಲ 300 ಮೀ. ವರೆಗಿನ ಉದ್ದಕ್ಕೆ ರೂ. 1500/– ಮತ್ತು ನಂತರದ ಪ್ರತಿ 100 ಮೀ. ಉದ್ದದ ಬಲೆಗೆ ರೂ.500/– ರಂತೆ ಗರಿಷ್ಠ ಹೆಚ್ಚುವರಿ 200 ಮೀ.ವರೆಗೆ ಮಾತ್ರ | ಮೊದಲ 200 ಮೀ. ಉದ್ದಕ್ಕೆ ರೂ.1000/– ನಂತರ ಪ್ರತಿ 100 ಮೀ. ಉದ್ದದ ಹೆಚ್ಚುವರಿ ಬಲೆಗೆ ರೂ.150/–ರಂತೆ ಗರಿಷ್ಠ ಹೆಚ್ಚುವರಿ 200 ಮೀ. ವರೆಗೆ ಮಾತ್ರ | – |
| 3 | ಹರಿಗೋಲು ಬಳಸಿ ಬೀಸು ಬಲೆಯಲ್ಲಿ (ಇಬ್ಬರು ಮೀನುಗಾರರು ಸೇರಿ) ಮೀನು ಶಿಕಾರಿ ಮಾಡುವುದು. | ವಾರ್ಷಿಕ ರೂ.2000/– | ವಾರ್ಷಿಕ ರೂ.1250/– | – |
| 4 | ಲಾಂಗ್‌ಲೈನ್ ಬಳಸಿ ಹರಿಗೋಲು ಸಹಾಯ ದಿಂದ ಮೀನು ಶಿಕಾರಿ | ವಾರ್ಷಿಕ ರೂ.1500/– | ವಾರ್ಷಿಕ ರೂ. 1000/– | – |
| 5 | ಗಾಳ / ರಾಡ್ ಮತ್ತು ಲೈನ್ ಬಳಸಿ ಮೀನು ಶಿಕಾರಿ ಪ್ರತಿ ಒಬ್ಬ ವ್ಯಕ್ತಿಗೆ (ವೃತ್ತಿಪರ ಮೀನುಗಾರರಿಗೆ) | ವಾರ್ಷಿಕ ರೂ.1000/– ಅಥವಾ ಪ್ರತಿ ತಿಂಗಳಿಗೆ ರೂ.400/– | ವಾರ್ಷಿಕ ರೂ.1000/– ಅಥವಾ ಪ್ರತಿ ತಿಂಗಳಿಗೆ ರೂ.300/– | – |
| 6 | ಗಾಳ / ರಾಡ್ ಮತ್ತು ಲೈನ್ ಬಳಸಿ ಮೀನು ಶಿಕಾರಿ ಪ್ರತಿ ಒಬ್ಬ ವ್ಯಕ್ತಿಗೆ (ಕ್ರೀಡಾ ಮೀನುಗಾರಿಕೆ) | ಮಾಸಿಕ ರೂ.400/– ಪ್ರತಿ ವಾರಕ್ಕೆ ರೂ.150/– | ಮಾಸಿಕ ರೂ. 400/– ಪ್ರತಿ ವಾರಕ್ಕೆ ರೂ.150/– | ಕೆರೆಯಲ್ಲಿ ಕ್ರೀಡಾ ಮೀನುಗಾರಿಕೆಯನ್ನು ಮಾಡಬಿಚ್ಛಿಸುವವರಿಗೆ ಅಂತಹ ಕೆರೆಯ ಬಿಡ್‌ದಾರರು/ಗುತ್ತಿಗೆದಾರರು ಪರವಾನಿಗೆ ಯನ್ನು ನೀಡುವ ಅಧಿಕಾರ ಹೊಂದಿರುತ್ತಾರೆ. |

ಕಂಡಿಕೆ-16:-

ಮೀನುಗಾರಿಕೆ ಇಲಾಖೆಯಿಂದ ಅಧಿಕೃತವಾಗಿ ಗುತ್ತಿಗೆ ಆದೇಶ ಅಥವಾ ಟೆಂಡರ್ / ಹರಾಜು ದೃಢೀಕರಣ ಆದೇಶ ಪಡೆದ ಗುತ್ತಿಗೆದಾರರಿಗೆ ಅವರು ಪಡೆದಿರುವ ಜಲಸಂಪನ್ಮೂಲವನ್ನು ಅಭಿವೃದ್ಧಿಪಡಿಸಲು ಗ್ರಾಮಸ್ಥರು ಅಥವಾ ಇತರೆ ಸಾರ್ವಜನಿಕರು ಅಡ್ಡಿಪಡಿಸಿದಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಪೊಲೀಸ್ ಇಲಾಖೆಯು ಸೂಕ್ತ ರಕ್ಷಣೆ ಒದಗಿಸುವುದು. ಈ ಸಂಬಂಧ ಮೀನುಗಾರಿಕೆ ಇಲಾಖೆಯ ಅಧಿಕಾರಿಗಳು ಗುತ್ತಿಗೆದಾರರಿಗೆ ರಕ್ಷಣೆ ಒದಗಿಸಿಕೊಡಲು ಸಹಕರಿಸಬೇಕು.

ಕಂಡಿಕೆ-17:-

ಈ ಆದೇಶದಲ್ಲಿನ ನಿಯಮಗಳ ಬಗ್ಗೆ ಸ್ಪಷ್ಟೀಕರಣವು ಅಗತ್ಯವೆನಿಸಿದಲ್ಲಿ ಸರ್ಕಾರದಿಂದ ಪಡೆಯತಕ್ಕದ್ದು, ಸರ್ಕಾರದ ನಿರ್ಣಯವೇ ಅಂತಿಮವಾಗಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಆಇ/72/ವೆಚ್ಚ-4/2014, ದಿನಾಂಕ:25-01-2014ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಕೆ.ಹೆಚ್. ಅಶ್ವತ್ಥನಾರಾಯಣ ಗೌಡ

ಸರ್ಕಾರದ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014

ಅನುಬಂಧ-1

ಮೀನುಗಾರರ ಸಹಕಾರ ಸಂಘಗಳು ಒಳನಾಡು ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಪಡೆಯಲು ಇರಬೇಕಾದ ಅರ್ಹತೆಗಳು ಮತ್ತು ಸಲ್ಲಿಸಬೇಕಾದ ದಾಖಲಾತಿಗಳು

1) ಗುತ್ತಿಗೆ ಕೋರಿರುವ ಮೀನುಗಾರರ ಸಹಕಾರ ಸಂಘವು, ಹಾಲಿ ಕಾರ್ಯನಿರ್ವಹಿಸುತ್ತಿರಬೇಕು, ಬರ್ಖಾಸ್ತು (ಸೂಪರ್‌ಸೀಡ್) ಆಗಿರಬಾರದು. ಹಾಗೂ ಕರ್ನಾಟಕ ಸಹಕಾರಿ ಕಾಯ್ದೆಯನ್ವಯ ನಿಯಮಾನುಸಾರ ಆಡಳಿತ ಮಂಡಳಿಯ ಸಭೆಗಳನ್ನು ಮತ್ತು ಮಹಾಸಭೆಗಳನ್ನು ನಡೆಸಿರಬೇಕು.

2) ಗುತ್ತಿಗೆ ಕೋರಿರುವ ಜಲಸಂಪನ್ಮೂಲವು ಮೀನುಗಾರರ ಸಹಕಾರಿ ಸಂಘದ ಕಾರ್ಯವ್ಯಾಪ್ತಿಯಲ್ಲಿರಬೇಕು.

3) ಕರ್ನಾಟಕ ಸಹಕಾರಿ ಕಾಯ್ದೆಯನ್ವಯ ಸಹಕಾರಿ ಸಂಘವು ಚುನಾವಣೆಯನ್ನು ನಡೆಸಿರಬೇಕು. ಮತ್ತು ಆಡಳಿತ ಮಂಡಳಿ ರಚನೆಯಾಗಿರಬೇಕು.

4) ಸಂಘವು ಕಳೆದ 5 ವರ್ಷಗಳ ಅವಧಿಯಲ್ಲಿ ಯಾವುದಾದರೂ ಮೂರು ವರ್ಷಗಳ ಲೆಕ್ಕ ಪರಿಶೋಧನಾ ವರದಿಯನ್ನು ಸಹಕಾರಿ ಇಲಾಖೆ ನಡೆಸಿದ ಮತ್ತು ಅವುಗಳ ಅನುಪಾಲನಾ ವರದಿಯನ್ನು ಸಲ್ಲಿಸಬೇಕು.

5) ಈ ಹಿಂದೆ ಸಂಘವು ಕೆರೆಗಳನ್ನು ಗುತ್ತಿಗೆಗೆ ಪಡೆದಿದ್ದಲ್ಲಿ ಹಿಂದಿನ 5 ವರ್ಷಗಳ ಅವಧಿಯಲ್ಲಿ ಕನಿಷ್ಠ 2 ವರ್ಷಗಳಲ್ಲಿ ಸಂಘವು ಲಾಭದಲ್ಲಿರಬೇಕು. ನಷ್ಟದಲ್ಲಿರುವ ಸಹಕಾರ ಸಂಘ ಗುತ್ತಿಗೆ ಪಡೆಯಲು ಅನರ್ಹವಾಗುತ್ತದೆ.

6) ಸಂಘವು ಗುತ್ತಿಗೆಗೆ ಕೋರುತ್ತಿರುವ ಜಲಸಂಪನ್ಮೂಲದಲ್ಲಿ ಪ್ರತಿ ಹೆಕ್ಟೇರ್ ಉಪಯುಕ್ತತಾ ಜಲವಿಸ್ತೀರ್ಣಕ್ಕೆ ಕನಿಷ್ಠ 2000 ಬಲಿತ ಬಿತ್ತನೆ ಮೀನುಮರಿಗಳನ್ನು ಬಿತ್ತನೆ ಮಾಡಲು / ಖರೀದಿಸಲು ಬೇಕಾದ ಮೊತ್ತ ಮತ್ತು ಕೆರೆಯ ಗುತ್ತಿಗೆ ಮೊತ್ತ ಮತ್ತು ಭದ್ರತಾ ಠೇವಣಿ ಮೊತ್ತವನ್ನು ಪಾವತಿಸಲು ಬೇಕಾದ ಮೊತ್ತವು ಅವರ ಚಾಲ್ತಿ ಖಾತೆಯಲ್ಲಿರಬೇಕು. ಆರ್ಥಿಕ ಸ್ಥಿತಿಯನ್ನು ದೃಢೀಕರಿಸಲು ಸಂಘದ ಬ್ಯಾಂಕ್ ಖಾತೆಯ ಪಾಸ್ ಪುಸ್ತಕದ ದೃಢೀಕೃತ ಪ್ರತಿ ಸಲ್ಲಿಸಬೇಕು.

7) ಸಂಘದ ನೋಂದಣಿ ಪತ್ರ, ಬೈಲಾ ಪ್ರತಿ, ಸಂಘದ ಆಡಳಿತ ಮಂಡಳಿ ಸದಸ್ಯರ ಪಟ್ಟಿ, ಈ ಹಿಂದೆ ಗುತ್ತಿಗೆಗೆ ಪಡೆದಿದ್ದ ಜಲಸಂಪನ್ಮೂಲದಲ್ಲಿ ಬಿತ್ತನೆ ಮಾಡಲಾದ ಮೀನುಮರಿಗಳು, ಹಿಡುವಳಿ ಮಾಡಲಾದ ಪ್ರಮಾಣ ಮತ್ತು ಗಳಿಸಿದ ಆದಾಯದ ವಿವರಗಳನ್ನು ಸಲ್ಲಿಸಬೇಕು. ಜಲಸಂಪನ್ಮೂಲದ ಗುತ್ತಿಗೆ ಮೊತ್ತವನ್ನು ಮತ್ತು ಠೇವಣಿ ಮೊತ್ತವನ್ನು ಮುಂಗಡವಾಗಿ ಡಿ.ಡಿ. ಮುಖಾಂತರ ಪಾವತಿಸಬೇಕು.

8) ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ವಿವರ ಸಲ್ಲಿಸಬೇಕು (ಸಾಲ ಮತ್ತು ಷೇರು ಬಂಡವಾಳ ಇತ್ಯಾದಿ) ಸುಸ್ತಿಯಲ್ಲಿರುವ ಸಹಕಾರ ಸಂಘ, ಗುತ್ತಿಗೆಯನ್ನು ಪಡೆಯಲು ಅನರ್ಹವಾಗುತ್ತದೆ.

9) ಸಂಘವು ಜಲಸಂಪನ್ಮೂಲದ ಗುತ್ತಿಗೆಯನ್ನು ಕೋರಿರುವ ಆಡಳಿತ ಮಂಡಳಿಯ ನಡವಳಿಯ (ಠರಾವು) ನೋಟರೀಕರಿಸಿದ ಪ್ರತಿಯನ್ನು ಸಲ್ಲಿಸಬೇಕು.

10) ಹೊಸದಾಗಿ ನೋಂದಾಯಿಸಲ್ಪಟ್ಟ ಮೀನುಗಾರರ ಸಹಕಾರ ಸಂಘ/ಸಂಸ್ಥೆಗಳು ನೋಂದಾಯಿಸಲ್ಪಟ್ಟ ದಿನಾಂಕದಿಂದ ಒಂದು ವರ್ಷದ ನಂತರವೇ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಪಡೆಯಲು ಅರ್ಹತೆಯನ್ನು ಹೊಂದುತ್ತವೆ

ಮೇಲ್ಕಾಣಿಸಿದ ಅರ್ಹತೆಗಳನ್ನು ಹೊಂದಿದಲ್ಲಿ ಮತ್ತು ದಾಖಲಾತಿಗಳನ್ನು ಒದಗಿಸಿದಲ್ಲಿ ಮಾತ್ರ ಮೀನುಗಾರರ ಸಹಕಾರ ಸಂಘವು ಕೆರೆಯ ಮೀನು ಪಾಶುವಾರು ಹಕ್ಕನ್ನು ಪಡೆಯಲು ಅರ್ಹತೆ ಹೊಂದುತ್ತದೆ.

ಜಿ.ಜಯಣ್ಣ

ಸರ್ಕಾರದ ಅಧೀನ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014

ಅನುಬಂಧ-2

ಗುತ್ತಿಗೆ ಅಥವಾ ಟೆಂಡರ್-ಕಂ-ಹರಾಜು ಮೂಲಕ ವಿಲೇ ಮಾಡುವ ಜಲಾಶಯಗಳ ಪಟ್ಟಿ

| ಜಿಲ್ಲೆ | ತಾಲ್ಲೂಕು | ಜಲಾಶಯದ ಹೆಸರು | | ಗರಿಷ್ಠ ಜಲವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) |
|---|---|---|---|---|
| ರಾಮನಗರ | ಚನ್ನಪಟ್ಟಣ | 1 | ಕಣ್ವ | 447.00 |
| ರಾಮನಗರ | ರಾಮನಗರ | 2 | ಬೈರಮಂಗಲ | 411.98 |
| ರಾಮನಗರ | ಮಾಗಡಿ | 3 | ಮಂಚನಬೆಲೆ | 334.00 |
| ರಾಮನಗರ | ಕನಕಪುರ | 4 | ಅರ್ಕಾವತಿ | 665.00 |
| ಬೀದರ್ | ಬಸವಕಲ್ಯಾಣ | 5 | ಮುಲ್ಲಾಮಾರಿ | 277.00 |
| ಚಾಮರಾಜನಗರ | ಚಾಮರಾಜನಗರ | 6 | ಸುವರ್ಣಾವತಿ | 485.00 |
| ಚಾಮರಾಜನಗರ | ಚಾಮರಾಜನಗರ | 7 | ಚಿಕ್ಕಹೊಳೆ | 120.00 |
| ಚಾಮರಾಜನಗರ | ಕೊಳ್ಳೇಗಾಲ | 8 | ಗುಂಡಾಲ್ | 280.00 |
| ಯಾದಗಿರಿ | ಯಾದಗಿರಿ | 9 | ಹತ್ತಿಕುಣಿ | 121.00 |
| ಯಾದಗಿರಿ | ಯಾದಗಿರಿ | 10 | ಸೌದಾಗಾರ್ | 124.00 |
| ಗುಲ್ಬರ್ಗಾ | ಚಿಂಚೋಳಿ | 11 | ಚಂದ್ರಂಪಲ್ಲಿ | 356.00 |
| ಕೊಡಗು | ಸೋಮವಾರಪೇಟೆ | 12 | ಚಿಕ್ಲಿಹೊಳೆ | 105.00 |
| ಕೋಲಾರ | ಮಾಲೂರು | 13 | ಮಾರ್ಕಂಡೇಯ | 155.00 |
| ಕೊಪ್ಪಳ | ಗಂಗಾವತಿ | 14 | ಸಾಣಾಪುರ | 40.00 |
| ಕೊಪ್ಪಳ | ಗಂಗಾವತಿ | 15 | ಮಲ್ಲಾಪುರ | 40.00 |
| ಕೊಪ್ಪಳ | ಕೊಪ್ಪಳ | 16 | ಶಿವಪುರ | 125.00 |
| ಕೊಪ್ಪಳ | ಕುಷ್ಟಗಿ | 17 | ಕನಕನಾಳ | 191.00 |
| ಮಂಡ್ಯ | ಮಳವಳ್ಳಿ | 18 | ಶಿವನಸಮುದ್ರ | 320.00 |
| ಮಂಡ್ಯ | ಮಳವಳ್ಳಿ | 19 | ಭೀಮಾ | 80.00 |
| ರಾಯಚೂರು | ದೇವದುರ್ಗ | 20 | ಗಣೇಕಲ್ | 292.00 |
| ರಾಯಚೂರು | ಮಾನ್ವಿ | 21 | ರಾಜೋಲಿಬಂಡ | 200.00 |
| ರಾಯಚೂರು | ಲಿಂಗಸುಗೂರು | 22 | ಮಸ್ಕಿ | 173.00 |
| ತುಮಕೂರು | ಕೊರಟಗೆರೆ | 23 | ತೀತಾ | 150.00 |
| ತುಮಕೂರು | ಕುಣಿಗಲ್ | 24 | ಮಂಗಳಾ | 246.00 |
| ಹಾವೇರಿ | ಹಾನಗಲ್ | 25 | ಚಿಗಳ್ಳಿ | 183.00 |
| ಬೀದರ್ | ಬಸವಕಲ್ಯಾಣ | 26 | ಚುಳಕಿನಾಲಾ | 737.00 |
| ಗುಲ್ಬರ್ಗಾ | ಆಳಂದ | 27 | ಅಮರ್ಜಾ | 640.00 |
| ಗುಲ್ಬರ್ಗಾ | ಚಿಂಚೋಳಿ | 28 | ಲೋಯರ್ ಮುಲ್ಲಾಮಾರಿ | 845.00 |
| ದಾವಣಗೆರೆ | ಹರಿಹರ | 29 | ದೇವರಬೆಳಕೆರೆ | 647.00 |
| ಬಳ್ಳಾರಿ | ಹಗರಿಬೊಮ್ಮನಹಳ್ಳಿ | 30 | ಹಗರಿಬೊಮ್ಮನಹಳ್ಳಿ | 1209.00 |
| ಬಳ್ಳಾರಿ | ಸಂಡೂರು | 31 | ದರೋಜಿ | 840.00 |
| ಮೈಸೂರು | ಹೆಚ್.ಡಿ.ಕೋಟೆ | 32 | ನುಗು | 1413.00 |
| ಮೈಸೂರು | ತಾರಕ | 33 | ತಾರಕ | 1080.00 |

ಜಿ.ಜಯಣ್ಣ
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

ಆದೇಶ ಸಂಖ್ಯೆ:ಪಸಂಮೀ 125 ಮೀಇಉ 2013, ಬೆಂಗಳೂರು ದಿನಾಂಕ:21-02-2014

ಅನುಬಂಧ-3

ಹರಾಜಿನ ಮೂಲಕ ಮೀನು ಪಾಶುವಾರು ಹಕ್ಕನ್ನು ವಿಲೇ ಮಾಡುವ ಜಲಾಶಯಗಳ ಪಟ್ಟಿ

| ಜಿಲ್ಲೆ | ತಾಲ್ಲೂಕು | ಜಲಾಶಯದ ಹೆಸರು | | ಗರಿಷ್ಠ ಜಲವಿಸ್ತೀರ್ಣ |
|---|---|---|---|---|
| ಬೆಳಗಾಂ | ಬೆಳಗಾಂ | 1 | ರಾಕಸಕೊಪ್ಪ | 360.00 |
| ಬೆಳಗಾಂ | ಬೈಲಹೊಂಗಲ | 2 | ತಿಗಡಿಹಾಲಿನಾಳ | 296.00 |
| ಬೆಳಗಾಂ | ಹುಕ್ಕೇರಿ | 3 | ಘಟಪ್ರಭಾ | 7800.00 |
| ಬೆಳಗಾಂ | ಬೆಳಗಾಂ | 4 | ಮಾರ್ಕಂಡೇಯ | 890.00 |
| ಬೆಳಗಾಂ | ಸೌಂದತ್ತಿ | 5 | ಮಲಪ್ರಭಾ | 13568.00 |
| ಬಳ್ಳಾರಿ | ಸಂಡೂರು | 6 | ನಾರಿಹಳ್ಳ | 280.00 |
| ಚಿಕ್ಕಮಗಳೂರು | ತರೀಕೆರೆ | 7 | ಜಂಬದಹಳ್ಳ | 165.00 |
| ಚಿಕ್ಕಮಗಳೂರು | ನರಸಿಂಹರಾಜಪುರ | 8 | ಭದ್ರಾ | 11250.00 |
| ಚಿತ್ರದುರ್ಗ | ಮೊಳಕಾಲ್ಮೂರು | 9 | ರಂಗಯ್ಯನ ದುರ್ಗ | 320.00 |
| ಚಿತ್ರದುರ್ಗ | ಹಿರಿಯೂರು | 10 | ವಾಣಿವಿಲಾಸ ಸಾಗರ | 8640.00 |
| ಚಿತ್ರದುರ್ಗ | ಹಿರಿಯೂರು | 11 | ಗಾಯತ್ರಿ | 793.00 |
| ಧಾರವಾಡ | ಕಲಘಟಗಿ | 12 | ನೀರಸಾಗರ | 490.00 |
| ಕೋಲಾರ | ಬಂಗಾರಪೇಟೆ | 13 | ಬೇತಮಂಗಲ | 317.00 |
| ಮಂಡ್ಯ | ಮಳವಳ್ಳಿ | 14 | ನೆಟ್ಕಲ್ | 95.00 |
| ಮಂಡ್ಯ | ಶ್ರೀರಂಗಪಟ್ಟಣ | 15 | ಕೆ.ಆರ್.ಸಾಗರ | 12924.00 |
| ಶಿವಮೊಗ್ಗ | ಸಾಗರ | 16 | ಸಿರೂರ್ | 144.00 |
| ಶಿವಮೊಗ್ಗ | ಹೊಸನಗರ | 17 | ಚಕ್ರಾ | 1228.00 |
| ಶಿವಮೊಗ್ಗ | ಶಿಕಾರಿಪುರ | 18 | ಅಂಜನಾಪುರ | 1340.00 |
| ಶಿವಮೊಗ್ಗ | ಶಿವಮೊಗ್ಗ | 19 | ತುಂಗಾ | 1631.00 |
| ಶಿವಮೊಗ್ಗ | ಹೊಸನಗರ | 20 | ಸಾವೆಹಕ್ಲು | 940.00 |
| ಶಿವಮೊಗ್ಗ | ಸಾಗರ | 21 | ತಲಕಳಲೆ | 768.00 |
| ಶಿವಮೊಗ್ಗ | ಶಿಕಾರಿಪುರ | 22 | ಅಂಬ್ಲಿಗೋಳ | 685.00 |
| ಶಿವಮೊಗ್ಗ | ತೀರ್ಥಹಳ್ಳಿ | 23 | ವಾರಾಹಿ | 550.00 |
| ಶಿವಮೊಗ್ಗ | ಸಾಗರ | 24 | ಲಿಂಗನಮಕ್ಕಿ | 32256.00 |
| ಉತ್ತರ ಕನ್ನಡ | ಮುಂಡಗೋಡು | 25 | ಧರ್ಮಾ | 696.00 |
| ಉತ್ತರ ಕನ್ನಡ | ಹೊನ್ನಾವರ | 26 | ಗೇರುಸೊಪ್ಪ | 600.00 |
| ಉತ್ತರ ಕನ್ನಡ | ಜೋಯಿಡಾ | 27 | ಆಸರ್ ಕನೇರಿ. | 400.00 |
| ಉತ್ತರ ಕನ್ನಡ | ಹಳಿಯಾಳ | 28 | ಬೊಮ್ಮನಹಳ್ಳಿ | 1539.00 |
| ಉತ್ತರ ಕನ್ನಡ | ಹಳಿಯಾಳ | 29 | ತಟ್ಟಿಹಳ್ಳ | 2537.00 |
| ಉತ್ತರ ಕನ್ನಡ | ಕಾರವಾರ | 30 | ಕೊಡಸಳ್ಳಿ | 1735.00 |
| ಉತ್ತರ ಕನ್ನಡ | ಕಾರವಾರ | 31 | ಕದ್ರಾ | 3775.00 |
| ಉತ್ತರ ಕನ್ನಡ | ಕಾರವಾರ | 32 | ಸೂಪಾ | 12100.00 |
| ಮೈಸೂರು | ಹೆಚ್.ಡಿ.ಕೋಟೆ | 33 | ಕಬಿನಿ | 6092.00 |
| ಬೀದರ್ | ಬಾಲ್ಕಿ | 34 | ಕಾರಂಜ | 5672.00 |
| ಬಿಜಾಪುರ | ಮುದ್ದೇಬಿಹಾಳ | 35 | ಬಸವಸಾಗರ | 13048.00 |
| ಬಿಜಾಪುರ | ಬಸವನಬಾಗೇವಾಡಿ | 36 | ಆಲಮಟ್ಟಿ | 48787.00 |

| ಜಿಲ್ಲೆ | ತಾಲ್ಲೂಕು | ಜಲಾಶಯದ ಹೆಸರು | | ಗರಿಷ್ಠ ಜಲವಿಸ್ತೀರ್ಣ |
|---|---|---|---|---|
| ದಾವಣಗೆರೆ | ಚನ್ನಗಿರಿ | 37 | ಶಾಂತಿಸಾಗರ | 2977.00 |
| ಗುಲ್ಬರ್ಗಾ | ಗುಲ್ಬರ್ಗಾ | 38 | ಗಂಡೋರಿ ನಾಲಾ | 664.00 |
| ಗುಲ್ಬರ್ಗಾ | ಅಫ್ಜಲ್ ಪುರ | 39 | ಭೀಮಾ ಲಿಫ್ಟ್ | 1098.00 |
| ಗುಲ್ಬರ್ಗಾ | ಚಿತ್ತಾಪುರ | 40 | ಬೆಣ್ಣೆತೊರಾ | 2201.00 |
| ಕೊಡಗು | ಸೋಮವಾರಪೇಟೆ | 41 | ಹಾರಂಗಿ | 1886.00 |
| ಕೊಪ್ಪಳ | ಕೊಪ್ಪಳ | 42 | ಹಿರೆಹಳ್ಳ | 1247.00 |
| ಹಾಸನ | ಬೇಲೂರು | 43 | ವಾಟೆಹೊಳೆ | 600.00 |
| ಹಾಸನ | ಬೇಲೂರು | 44 | ಯಗಚಿ | 1961.00 |
| ಹಾಸನ | ಹಾಸನ | 45 | ಹೇಮಾವತಿ | 9162.00 |
| ಬೆಂಗಳೂರು(ಗ್ರಾ) | ಬೆಂಗಳೂರು(ಗ್ರಾ) | 46 | ಹೆಸರಘಟ್ಟ | 1160.00 |
| ಬೆಂಗಳೂರು(ಗ್ರಾ) | ಬೆಂಗಳೂರು(ಗ್ರಾ) | 47 | ತಿಪ್ಪಗೊಂಡನಹಳ್ಳಿ | 1162.00 |
| ತುಮಕೂರು | ಚಿಕ್ಕನಾಯಕನಹಳ್ಳಿ | 48 | ಬೋರನಕಣಿವೆ | 1346.00 |
| ತುಮಕೂರು | ಕುಣಿಗಲ್ | 49 | ಮಾರ್ಕೋನಹಳ್ಳಿ | 1336.00 |

ಜಿ.ಜಯಣ್ಣ
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

**ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ**

ಅನುಬಂಧ-4

ಒಳನಾಡು ಜಲಸಂಪನ್ಮೂಲಗಳಲ್ಲಿನ ಮೀನು ಪಾಶುವಾರು ಹಕ್ಕನ್ನು ಮೀನುಗಾರಿಕೆ ಇಲಾಖೆಯಿಂದ ಗುತ್ತಿಗೆ ಮುಖಾಂತರ ವಿಲೇವಾರಿ ಮಾಡುವ ಸಂಬಂಧ ಮೀನುಗಾರಿಕೆ ಅಧಿಕಾರಿಗಳು ಕಡ್ಡಾಯವಾಗಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಮಾರ್ಗಸೂಚಿಗಳು

1. ತಾಲ್ಲೂಕು ಮೀನುಗಾರಿಕೆ ಅಧಿಕಾರಿಗಳು ಪ್ರತಿ ಮೀನುಗಾರಿಕೆ ಫಸಲಿ ವರ್ಷದ **ಮೇ ತಿಂಗಳ ಮೊದಲನೇ ವಾರದಲ್ಲಿ** ತಮ್ಮ ವ್ಯಾಪ್ತಿಗೆ ಬರುವ ಜಲಸಂಪನ್ಮೂಲಗಳ ಪೈಕಿ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ನೀಡಲು ಲಭ್ಯವಿರುವ ಎಲ್ಲಾ ಜಲಸಂಪನ್ಮೂಲಗಳ ಪಟ್ಟಿಯನ್ನು (ನವೀಕರಿಸಿಕೊಳ್ಳದ ಕೆರೆಗಳೂ ಸೇರಿದಂತೆ) ತಯಾರು ಮಾಡಿ ಗುತ್ತಿಗೆಗೆ ಮೀನುಗಾರರ ಸಹಕಾರ ಸಂಘಗಳಿಂದ ಅರ್ಜಿಗಳನ್ನು ಆಹ್ವಾನಿಸಲು ಈ ಆದೇಶದ ಅನುಬಂಧ-8ರಲ್ಲಿರುವ ನಿಗದಿತ ನಮೂನೆಯಲ್ಲಿ ಪ್ರಕಟಣೆಯನ್ನು ಹೊರಡಿಸತಕ್ಕದ್ದು. ಮತ್ತು ಈ ಬಗ್ಗೆ ಸಂಕ್ಷಿಪ್ತವಾಗಿ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಿಸುವುದು ಹಾಗೂ ಪ್ರಕಟಣೆಯ ಪ್ರತಿಗಳನ್ನು ಕೆರೆಯ ವ್ಯಾಪ್ತಿಯ ಸಂಬಂಧಪಟ್ಟ ಎಲ್ಲಾ ಗ್ರಾಮ ಪಂಚಾಯತ್‌ಗಳ, ತಾಲ್ಲೂಕು ಪಂಚಾಯತ್‌ಗಳ, ತಾಲ್ಲೂಕಿನ ತಹಶೀಲ್ದಾರರ ಕಛೇರಿಯ ಮತ್ತು ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿ ಕಛೇರಿಯ ಜಾಹೀರಾತು ಫಲಕಗಳಲ್ಲಿ ಪ್ರದರ್ಶಿಸುವ ವ್ಯವಸ್ಥೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು. ಪ್ರಕಟಣೆಯ ಪ್ರತಿಯನ್ನು ತಾಲ್ಲೂಕಿನಲ್ಲಿ ನೋಂದಾಯಿಸಿಕೊಂಡಿರುವ ಎಲ್ಲಾ ಮೀನುಗಾರರ ಸಹಕಾರ ಸಂಘಗಳಿಗೆ "ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್" ಮುಖಾಂತರ ಕಡ್ಡಾಯವಾಗಿ ರವಾನಿಸುವುದು ಅಥವಾ ಮುದ್ದಾಂ ಮೂಲಕ ನೀಡಿ ಸ್ವೀಕೃತಿಯನ್ನು ಪಡೆಯತಕ್ಕದ್ದು. ಇಂತಹ ಪ್ರಕಟಣೆಯ ಪ್ರತಿಯೊಂದನ್ನು ಪ್ರಕಟಿಸಿದ ಕೂಡಲೇ ಜಿಲ್ಲಾ ಮಟ್ಟದ ಮೀನುಗಾರಿಕೆ ಅಧಿಕಾರಿಗಳಿಗೆ ಸಲ್ಲಿಸತಕ್ಕದ್ದು. ಈ ಆದೇಶದ ಅನುಬಂಧ-9ರಲ್ಲಿನ ನಿಗದಿತ ನಮೂನೆಯಲ್ಲಿ ಗುತ್ತಿಗೆಯನ್ನು ಕೋರಿ ಬರುವ ಅರ್ಜಿಗಳನ್ನು ಸ್ವೀಕರಿಸಲು **ಮೇ 3ನೇ ವಾರ ಅಂತಿಮ ಗಡುವು ನೀಡತಕ್ಕದ್ದು (ಕನಿಷ್ಠ 20 ದಿನಗಳು)**

2. ಮೀನು ಪಾಶುವಾರು ಹಕ್ಕಿನ ಗುತ್ತಿಗೆಯನ್ನು ಪಡೆಯಲು ಅರ್ಜಿ ಸಲ್ಲಿಸುವ ಮೀನುಗಾರರ ಸಹಕಾರ ಸಂಘಗಳು ತಮ್ಮ ಕಾರ್ಯವ್ಯಾಪ್ತಿಯಲ್ಲಿರುವ ಗರಿಷ್ಠ ಎರಡು ಕೆರೆ ಅಥವಾ ಒಂದು ಜಲಾಶಯದ (ಈ ಆದೇಶದ ಅನುಬಂಧ-2ರಂತೆ)(300 ಹೆಕ್ಟೇರ್ ಜಲವಿಸ್ತೀರ್ಣದ ಮಿತಿಗೊಳಪಟ್ಟಂತೆ) ಅಥವಾ ಎರಡು ನದಿ ಭಾಗದ ಮೀನು ಪಾಶುವಾರು ಹಕ್ಕನ್ನು ಮಾತ್ರ ಪಡೆಯಲು ಅರ್ಹತೆಯನ್ನು ಹೊಂದಿರುತ್ತವೆ. ಹಾಗೂ ಸದರಿ ಸಂಘವು ಈ ಆದೇಶದ ಅನುಬಂಧ-1ರಲ್ಲಿ ನಮೂದಿಸಿರುವ ಅರ್ಹತೆಗಳನ್ನು ಹೊಂದಿರುವ ಬಗ್ಗೆ ದೃಢೀಕರಿಸಿಕೊಳ್ಳುವುದು.

3. ಕೆರೆಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಕೋರಿರುವ ಮೀನುಗಾರರ ಸಹಕಾರ ಸಂಘ ಈ ಆದೇಶದ ಅನುಬಂಧ-1ರಲ್ಲಿ ನಮೂದಿಸಿರುವಂತೆ ಅರ್ಹತೆಗಳಿದ್ದಲ್ಲಿ ಹಾಗೂ ದಾಖಲಾತಿಗಳನ್ನು ಸಲ್ಲಿಸಿದ್ದಲ್ಲಿ ಅರ್ಜಿಗಳನ್ನು ತುಲನಾತ್ಮಕವಾಗಿ ಪರಿಶೀಲಿಸಿ, ಅರ್ಜಿಗಳು, ಗುತ್ತಿಗೆ ಮೊತ್ತ, ಭದ್ರತಾ ಠೇವಣಿ ಮೊತ್ತದ ಹುಂಡಿಗಳು ಮತ್ತು ಎಲ್ಲಾ ದಾಸ್ತಾವೇಜುಗಳೊಡನೆ ತಾಲ್ಲೂಕು ಮೀನುಗಾರಿಕೆ ಅಧಿಕಾರಿಯು ಸ್ಪಷ್ಟವಾದ ವರದಿಯನ್ನು ತಯಾರು ಮಾಡಿ ಪೂರ್ಣ ಮಾಹಿತಿಗಳೊಂದಿಗೆ ಸೂಕ್ತ ಪ್ರಸ್ತಾವನೆಯನ್ನು (ಈ ಆದೇಶದ ಅನುಬಂಧ-18ರಲ್ಲಿನ ಚೆಕ್‌ಲಿಸ್ಟ್‌ನೊಂದಿಗೆ) ಆ ವರ್ಷದ ಮೇ ತಿಂಗಳಿನ 31ನೇ ತಾರೀಖಿನೊಳಗಾಗಿ ಮೇಲಾಧಿಕಾರಿಗೆ ಸಲ್ಲಿಸತಕ್ಕದ್ದು. ಮೊದಲನೇ ವರ್ಷದ ಗುತ್ತಿಗೆ ಹಣ ಮತ್ತು ಭದ್ರತಾ ಠೇವಣಿಯನ್ನು ಅರ್ಜಿ ಸಲ್ಲಿಸಿದ ಎಲ್ಲಾ ಸಂಘಗಳಿಂದ / ಸಂಸ್ಥೆಗಳಿಂದ

ಮುಂಗಡವಾಗಿ ನಗದು ಹುಂಡಿ (ಡಿಡಿ) ಮುಖಾಂತರ ಸ್ವೀಕರಿಸಿ ಸ್ವೀಕೃತಿ ರಶೀದಿಯನ್ನು ನೀಡತಕ್ಕದ್ದು. ಈ ಬಗ್ಗೆ ಆದೇಶದಲ್ಲಿ "ಗುತ್ತಿಗೆಯು ಮೇಲಾಧಿಕಾರಿಗಳ ದೃಢೀಕರಣಕ್ಕೆ ಒಳಪಟ್ಟಿದೆ" ಎಂದು ನಮೂದಿಸತಕ್ಕದ್ದು. ಗುತ್ತಿಗೆ ಆದೇಶ ಮಂಜೂರಾದ ಬಳಿಕ ಯಶಸ್ವಿಯಾಗದ ಸಂಘಗಳ ನಗದು ಹುಂಡಿಯನ್ನು ನಿಯಮಾನುಸಾರ ಅವರಿಂದ ಸ್ವೀಕೃತಿ ಪಡೆದು ಹಿಂದಿರುಗಿಸತಕ್ಕದ್ದು.

4. ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಅಂತಿಮ ದಿನದೊಳಗೆ ಈ ಕೆಳಗೆ ಪಟ್ಟಿ ಮಾಡಿರುವ ದಾಖಲಾತಿಗಳನ್ನು ಸಲ್ಲಿಸದ ಸಹಕಾರ ಸಂಘದ ಅರ್ಜಿಯನ್ನು ತಾಲ್ಲೂಕು ಮೀನುಗಾರಿಕಾ ಅಧಿಕಾರಿಯು ತಿರಸ್ಕರಿಸುವುದು. ತಿರಸ್ಕರಿಸಿದ ಬಗ್ಗೆ ಕಾರಣಗಳನ್ನು ಪಟ್ಟಿ ಮಾಡಿ ಅರ್ಜಿದಾರ ಸಹಕಾರ ಸಂಘಕ್ಕೆ ಲಿಖಿತ ಹಿಂಬರಹ ನೀಡುವುದು.

   ಅ) ಕರ್ನಾಟಕ ಸಹಕಾರಿ ಕಾಯ್ದೆಯನ್ವಯ ನಿಯಮಾನುಸಾರ ಆಡಳಿತ ಮಂಡಳಿಯ ಸಭೆಗಳನ್ನು ಮತ್ತು ಚುನಾವಣೆಯನ್ನು ನಡೆಸಿರಬೇಕು ಹಾಗೂ ಆಡಳಿತ ಮಂಡಳಿ ರಚನೆಯಾಗಿರುವ ಬಗ್ಗೆ ದಾಖಲಾತಿಗಳು.

   ಆ) ಸಂಘದ ಕಳೆದ 5 ವರ್ಷಗಳ ಅವಧಿಯಲ್ಲಿ ಯಾವುದಾದರೂ 3 ವರ್ಷಗಳ ಲೆಕ್ಕ ಪರಿಶೋಧನಾ ವರದಿ (ಸಹಕಾರಿ ಇಲಾಖೆ ನಡೆಸಿದ) ಮತ್ತು ಅವುಗಳ ಅನುಪಾಲನಾ ವರದಿ.

   ಇ) ಸಂಘದ ಆರ್ಥಿಕ ಸ್ಥಿತಿಯನ್ನು ದೃಢೀಕರಿಸಲು ಸಂಘದ ಬ್ಯಾಂಕ್ ಖಾತೆಯ ಪಾಸ್ ಪುಸ್ತಕದ ದೃಢೀಕೃತ ಪ್ರತಿ.

   ಈ) ಗುತ್ತಿಗೆ ಮೊತ್ತ + ಠೇವಣಿ ಮೊತ್ತದ ನಗದು ಹುಂಡಿ.

   ಉ) ಮೀನುಗಾರರ ಸಹಕಾರ ಸಂಘದ ನೋಂದಣಿ ಪತ್ರ, ಬೈಲಾ ಪ್ರತಿ ಮತ್ತು ಗುತ್ತಿಗೆಯನ್ನು ಕೋರಿರುವ ಆಡಳಿತ ಮಂಡಳಿಯ ನೋಟರೀಕರಿಸಿದ ಠರಾವು ಪ್ರತಿ.

5. ಗುತ್ತಿಗೆ ಕೋರಿ ಬಂದ ಪ್ರಸ್ತಾವನೆಗಳನ್ನು ಅವರ ಕಛೇರಿಯಲ್ಲಿ ಸ್ವೀಕರಿಸಿದ ಒಂದು ವಾರದೊಳಗಾಗಿ ಜಿಲ್ಲಾ ಮೀನುಗಾರಿಕಾ ಅಧಿಕಾರಿಗಳು ಮತ್ತು ವಲಯ ಮಟ್ಟದ ಮೀನುಗಾರಿಕಾ ಅಧಿಕಾರಿಗಳು ಅವರ ಅಧಿಕಾರ ವ್ಯಾಪ್ತಿಯಲ್ಲಿ ಗುತ್ತಿಗೆ ಆದೇಶವನ್ನು ಹೊರಡಿಸುವುದು. ಅವರ ಅಧಿಕಾರ ವ್ಯಾಪ್ತಿ ಮೀರಿದ ಪ್ರಸ್ತಾವನೆಗಳನ್ನು ಅವರ ಕಛೇರಿಗೆ ತಲುಪಿದ ಒಂದು ವಾರದೊಳಗಾಗಿ ಅವರ ಮೇಲಾಧಿಕಾರಿಗಳಿಗೆ ರವಾನಿಸತಕ್ಕದ್ದು. ಪ್ರಾರಂಭದಲ್ಲೇ ಅಪೂರ್ಣ ಅರ್ಜಿಗಳನ್ನು ತಿರಸ್ಕರಿಸಬೇಕು. ಅಪೂರ್ಣ ಅರ್ಜಿಗಳೊಡನೆ ಪ್ರಸ್ತಾವನೆ ಸಲ್ಲಿಸಿದ ತಾಲ್ಲೂಕು ಮೀನುಗಾರಿಕಾ ಅಧಿಕಾರಿಯ ಮೇಲೆ ಕರ್ತವ್ಯ ನಿರ್ಲಕ್ಷತೆಯ ಬಗ್ಗೆ ಶಿಸ್ತು ಕ್ರಮ ಜರುಗಿಸುವುದು.

6. ಮೀನು ಪಾಶುವಾರು ಪಕ್ಕಿನ ಗುತ್ತಿಗೆಯನ್ನು ನೀಡಿದ 5 ವರ್ಷಗಳ ಗುತ್ತಿಗೆ ಅವಧಿಯಲ್ಲಿ ಎರಡನೇ ವರ್ಷದಿಂದ ಪ್ರತೀ ವರ್ಷ ಗುತ್ತಿಗೆಯನ್ನು ನವೀಕರಿಸುವ ಅಧಿಕಾರವನ್ನು ಜಿಲ್ಲಾ ಮೀನುಗಾರಿಕೆ ಅಧಿಕಾರಿಗೆ ನೀಡಲಾಗಿದೆ. ನವೀಕರಿಸುವ ಮುನ್ನಾ ಗುತ್ತಿಗೆದಾರರು ಗುತ್ತಿಗೆಯ ಎಲ್ಲಾ ಷರತ್ತು ಮತ್ತು ನಿಬಂಧನೆಗಳನ್ನು ಪಾಲಿಸಿರುವ ಬಗ್ಗೆ ದಾಖಲಾತಿಗಳೊಡನೆ ದೃಢೀಕರಿಸಿಕೊಳ್ಳಬೇಕು. ಗುತ್ತಿಗೆದಾರರು ಗುತ್ತಿಗೆ ಅವಧಿಯಲ್ಲಿ ಪ್ರತೀ ವರ್ಷ ಪೂರ್ಣ ಗುತ್ತಿಗೆ ಮೊತ್ತವನ್ನು ಮೀನುಗಾರಿಕೆ ಫಸಲಿ ವರ್ಷ ಅಂತ್ಯವಾಗುವ ಮೊದಲೇ ಅಂದರೆ ಏಪ್ರಿಲ್ 30ರೊಳಗಾಗಿ ಪಾವತಿ ಮಾಡಿ ಗುತ್ತಿಗೆಯನ್ನು ನವೀಕರಿಸಿಕೊಳ್ಳತಕ್ಕದ್ದು. ಏಪ್ರಿಲ್ ತಿಂಗಳ ಮೊದಲನೇ ವಾರದಲ್ಲಿ ಗುತ್ತಿಗೆದಾರರಿಗೆ ಗುತ್ತಿಗೆ ಮೊತ್ತದ ಬೇಡಿಕೆ ನೋಟೀಸ್‌ನ್ನು "ನೋಂದಣಿ ಅಂಚೆ ಸ್ವೀಕೃತಿ ಬಾಕಿ" ಮುಖಾಂತರ ತಾಲ್ಲೂಕು ಮೀನುಗಾರಿಕಾ ಅಧಿಕಾರಿಯು ರವಾನಿಸುವುದು. ಈ ನೋಟೀಸ್ ನೀಡಿದ ನಂತರವೂ ಸಹ ಗುತ್ತಿಗೆದಾರರು ಗುತ್ತಿಗೆ ಮೊತ್ತವನ್ನು ನಿಗದಿತ ವೇಳೆಯೊಳಗಾಗಿ ಪಾವತಿಸದಿದ್ದಲ್ಲಿ ಹಾಗೂ ಇಲಾಖಾ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ಆದೇಶವನ್ನು ರದ್ದುಪಡಿಸುವ ಅಧಿಕಾರವನ್ನು ಗುತ್ತಿಗೆ ಆದೇಶ ನೀಡಿದ ಸಕ್ಷಮ ಪ್ರಾಧಿಕಾರ ಹೊಂದಿರುತ್ತದೆ. ಗುತ್ತಿಗೆ ರದ್ದುಪಡಿಸಿದ ನಂತರ ಮರುವಿಲೇಗೊಳಿಸುವ ಅಧಿಕಾರವನ್ನು ಜಿಲ್ಲಾ ಮೀನುಗಾರಿಕೆ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಿದೆ.

7. ಜಲಸಂಪನ್ಮೂಲದ ಒಟ್ಟು ಜಲವಿಸ್ತೀರ್ಣದ ಶೇಕಡ 50ರಷ್ಟು ಜಲವಿಸ್ತೀರ್ಣವನ್ನು ಉಪಯುಕ್ತತಾ ಜಲವಿಸ್ತೀರ್ಣ ಪ್ರದೇಶವೆಂದು ಗಣನೆಗೆ ತೆಗೆದುಕೊಂಡು, ಈ ರೀತಿ ಗಣನೆಗೆ ತೆಗೆದುಕೊಂಡ ಜಲವಿಸ್ತೀರ್ಣಕ್ಕೆ ಪ್ರತಿ ಹೆಕ್ಟೇರಿಗೆ ರೂ.500-00ರಂತೆ ಬರುವ ಮೊತ್ತ ಅಥವಾ ಹಿಂದಿನ ಮೂರು ವರ್ಷಗಳ ಸರಾಸರಿ ಆದಾಯ ಇವೆರಡರಲ್ಲಿ ಯಾವುದು ಹೆಚ್ಚೋ ಅದನ್ನು ಪ್ರಥಮ ವರ್ಷದ ಗುತ್ತಿಗೆ ಮೊತ್ತವೆಂದು ನಿಗಧಿಪಡಿಸುವುದು. ಈ ರೀತಿ ನಿಗದಿಪಡಿಸಿದ ಗುತ್ತಿಗೆ ಮೊತ್ತಕ್ಕೆ ಉಳಿದ ನಾಲ್ಕು ವರ್ಷಗಳ ಗುತ್ತಿಗೆ ಅವಧಿಯಲ್ಲಿ ಪ್ರತಿ ವರ್ಷ ಹಿಂದಿನ ವರ್ಷದ ಗುತ್ತಿಗೆ ಮೊತ್ತಕ್ಕೆ ಶೇಕಡ 5ರಂತೆ ಹೆಚ್ಚಿಸಿ ಗುತ್ತಿಗೆ ಮೊತ್ತವನ್ನು ನಿಗಧಿಪಡಿಸುವುದು.

8. ಗುತ್ತಿಗೆದಾರರು ಜಲಸಂಪನ್ಮೂಲದ ಗುತ್ತಿಗೆ ಮೊತ್ತದ ಶೇಕಡ 25ರಷ್ಟು ಹಣವನ್ನು ಭದ್ರತಾ ಠೇವಣಿಯಾಗಿ ಮೊದಲನೆಯ ವರ್ಷದ ಗುತ್ತಿಗೆ ಮೊತ್ತದೊಂದಿಗೆ ಡಿ.ಡಿ. ಮುಖಾಂತರ ಪಾವತಿಸತಕ್ಕದ್ದು. ಯಾವುದೇ ಷರತ್ತಿನ ಅಥವಾ ನಿಬಂಧನೆಯ ಉಲ್ಲಂಘನೆಯಾದಲ್ಲಿ ಸದರಿ ಭದ್ರತಾ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು. ಇಲ್ಲದಿದ್ದಲ್ಲಿ ಈ ಠೇವಣಿ ಹಣವನ್ನು ಬಡ್ಡಿರಹಿತವಾಗಿ ಗುತ್ತಿಗೆ ಅವಧಿಯು ಮುಗಿದ ನಂತರ ಗುತ್ತಿಗೆದಾರರಿಗೆ ಹಿಂದಿರುಗಿಸುವುದು.

9. ಗುತ್ತಿಗೆಗೆ ಪಡೆದ ಮೀನು ಪಾಶುವಾರು ಹಕ್ಕನ್ನು ಯಾವುದೇ ಕಾರಣಕ್ಕಾಗಿ ವರ್ಗಾಯಿಸತಕ್ಕದ್ದಲ್ಲ. ಹಾಗೂ ಉಪ ಗುತ್ತಿಗೆಗೆ ನೀಡತಕ್ಕದ್ದಲ್ಲ. ಒಂದು ಪಕ್ಷ ವರ್ಗಾಯಿಸಿದ್ದಲ್ಲಿ ಅಥವಾ ಉಪ ಗುತ್ತಿಗೆಗೆ ನೀಡಿರುವುದು ದಾಖಲೆಗಳಿಂದ ದೃಢಪಟ್ಟಲ್ಲಿ ಗುತ್ತಿಗೆ ಆದೇಶವನ್ನು ನೀಡಿದ ಸಕ್ಷಮ ಪ್ರಾಧಿಕಾರ ರದ್ದುಗೊಳಿಸುವ ಅಧಿಕಾರವನ್ನು ಹೊಂದಿರುತ್ತದೆ.

10. ಗುತ್ತಿಗೆದಾರರು ಗುತ್ತಿಗೆ ಪಡೆದ ಜಲಸಂಪನ್ಮೂಲದಲ್ಲಿ ಮೀನುಗಾರಿಕೆ ಚಟುವಟಿಕೆಯನ್ನು ಕೈಗೊಳ್ಳುವಾಗ ಸದರಿ ಜಲಸಂಪನ್ಮೂಲದ ಕಟ್ಟೆ, ಏರಿ, ತೂಬು ಮುಂತಾದವುಗಳಿಗೆ ಯಾವುದೇ ರೀತಿಯ ಹಾನಿಯುಂಟಾದಲ್ಲಿ ತಾಲ್ಲೂಕು ಮಟ್ಟದ ಅಧಿಕಾರಿಯು ಗುತ್ತಿಗೆ ಪಡೆದ ಗುತ್ತಿಗೆದಾರರ ಮೇಲೆ ಕ್ರಮವಹಿಸತಕ್ಕದ್ದು.

11. ಗುತ್ತಿಗೆಗೆ ಪಡೆದ ಜಲಸಂಪನ್ಮೂಲಗಳಲ್ಲಿ ಗುತ್ತಿಗೆದಾರರು ಡೈನಾಮೈಟ್, ಸಿಡಿಮದ್ದು, ರಾಸಾಯನಿಕ ವಸ್ತು ಅಥವಾ ವಿಷದ ಪ್ರಯೋಗವನ್ನಾಗಲೀ ಮಾಡಿ ಮೀನು ಹಿಡಿಯತಕ್ಕದ್ದಲ್ಲ. ಈ ನಿಬಂಧನೆಯನ್ನು ಉಲ್ಲಂಘಿಸಿದ ಗುತ್ತಿಗೆದಾರರ ಗುತ್ತಿಗೆಯನ್ನು

ತಕ್ಷಣದಿಂದ ರದ್ದುಪಡಿಸಿ ಅವರ ವಿರುದ್ಧ ಕಾನೂನಿನ ಕ್ರಮ ಕೈಗೊಳ್ಳತಕ್ಕದ್ದು. ಮತ್ತು ಈ ರೀತಿ ಅಕ್ರಮವಾಗಿ ಹಿಡಿದ ಮೀನನ್ನು ಹರಾಜು ಮಾಡಿ ಸರ್ಕಾರಕ್ಕೆ ಜಮಾ ಮಾಡಲು ಸಂಬಂಧಪಟ್ಟ ತಾಲ್ಲೂಕು ಮಟ್ಟದ ಅಧಿಕಾರಿಗಳು ಕ್ರಮ ಕೈಗೊಳ್ಳತಕ್ಕದ್ದು.

12. ಮೀನುಗಾರಿಕೆ ಇಲಾಖೆಯ ವ್ಯಾಪ್ತಿಯಲ್ಲಿನ ಒಳನಾಡು ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಪಟ್ಟಂತೆ ರೂಪಿಸಲಾಗಿರುವ ಯಾವುದೇ ನಿಯಮಗಳನ್ನು ಉಲ್ಲಂಘಿಸಿದ ಗುತ್ತಿಗೆದಾರರ ಗುತ್ತಿಗೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲು ಕ್ರಮವಹಿಸುವುದು. ಹಾಗೂ ಸರ್ಕಾರವು / ಮೀನುಗಾರಿಕೆ ಇಲಾಖೆಯು ಸದರಿ ವಿಷಯಕ್ಕೆ ಸಂಬಂಧಿಸಿದಂತೆ ಕಾಲಕಾಲಕ್ಕೆ ವಿಧಿಸಬಹುದಾದ ಹೆಚ್ಚುವರಿ ಷರತ್ತು ಮತ್ತು ನಿಬಂಧನೆಗಳಿಗೆ ಗುತ್ತಿಗೆದಾರರು ಬದ್ಧರಾಗಿರತಕ್ಕದ್ದು. ಈ ದಿಸೆಯಲ್ಲಿ ಈ ಆದೇಶದ ಅನುಬಂಧ-10ರಲ್ಲಿರುವ ನಿಗದಿತ ನಮೂನೆಯಲ್ಲಿರುವಂತೆ ಮುಚ್ಚಳಿಕೆ ಪತ್ರವನ್ನು ರೂ.200-00ರ ಮೌಲ್ಯದ ಛಾಪಾಕಾಗದದಲ್ಲಿ ಗುತ್ತಿಗೆದಾರರಿಂದ ಸಂಬಂಧಪಟ್ಟ ತಾಲ್ಲೂಕು ಮೀನುಗಾರಿಕೆ ಅಧಿಕಾರಿಗಳು ಪಡೆದುಕೊಳ್ಳತಕ್ಕದ್ದು.

13. ಮೀನುಗಾರಿಕೆ ಇಲಾಖೆಯ ವ್ಯಾಪ್ತಿಯಲ್ಲಿನ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಪಡೆದ ಮೀನುಗಾರರ ಸಹಕಾರ ಸಂಘಗಳ ಲೆಕ್ಕಪತ್ರಗಳನ್ನು ಮೀನುಗಾರಿಕೆ ಅಧಿಕಾರಿಗಳು ಪರಿಶೋಧನೆ ಮಾಡುವ ಅಧಿಕಾರವನ್ನು ಹೊಂದಿರುತ್ತಾರೆ.

14. ಗುತ್ತಿಗೆದಾರರು ಮೀನು ಪಾಶುವಾರು ಹಕ್ಕಿನ ಗುತ್ತಿಗೆ ಪಡೆದ ಜಲಸಂಪನ್ಮೂಲಗಳಲ್ಲಿ ಪ್ರತಿ ಹೆಕ್ಟೇರು ಉಪಯುಕ್ತತಾ ಜಲವಿಸ್ತೀರ್ಣಕ್ಕೆ ಕನಿಷ್ಠ 2000 ಬಲಿತ ಬಿತ್ತನೆ ಮೀನುಮರಿಗಳನ್ನು (70-80 ಎಂ.ಎಂ.) ಮೀನುಗಾರಿಕೆ ಇಲಾಖೆಯು ಅನುಮೋದಿಸಿದ ತಳಿಯ ಮೀನುಮರಿಗಳನ್ನು ಮಾತ್ರ ಮೀನುಗಾರಿಕೆ ಇಲಾಖೆಯ ಅಥವಾ ಮೀನುಗಾರಿಕೆ ಇಲಾಖೆಯಿಂದ ಅನುಮೋದಿಸಲ್ಪಟ್ಟ ಮೀನುಮರಿ ಉತ್ಪಾದನಾ / ಪಾಲನಾ ಕೇಂದ್ರಗಳಿಂದ ಖರೀದಿಸಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಅಧಿಕಾರಿಯ ಸಮ್ಮುಖದಲ್ಲಿ ಬಿತ್ತನೆ ಮಾಡತಕ್ಕದ್ದು. ಮೀನುಮರಿಗಳನ್ನು ಬಿತ್ತನೆ ಮಾಡಿರುವ ಬಗ್ಗೆ ಪ್ರತಿವರ್ಷ ಫೋಟೋ ದೃಢೀಕರಣವನ್ನು ತಾಲ್ಲೂಕು ಮಟ್ಟದ ಮೀನುಗಾರಿಕಾ ಅಧಿಕಾರಿಗಳಿಗೆ ನೀಡಬೇಕು.

15. ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಪಡೆದ ಯಾವುದೇ ಗುತ್ತಿಗೆದಾರರು ನಿಷೇಧಿತ ಮೀನು ತಳಿಗಳಾದ ಪ್ರಮುಖವಾಗಿ ಆಫ್ರಿಕನ್ ಕ್ಯಾಟ್ ಫಿಶ್ (ಆಫ್ರಿಕನ್ ಮೀನು), ಚೈನೀಸ್ ಬಿಗ್ ಹೆಡ್, ಥಾಯ್ ಇತರೆ ನಿಷೇಧಿತ ಮೀನುಮರಿಗಳ ಬಿತ್ತನೆ ಮಾಡುವುದು ಅಥವಾ ಅಭಿವೃದ್ಧಿಪಡಿಸುವುದು ಅಥವಾ ಮಾರಾಟ ಮಾಡುವುದು ಕಂಡುಬಂದಲ್ಲಿ ಅವರಿಗೆ ನೀಡಲಾದ ಗುತ್ತಿಗೆಯನ್ನು ಕೂಡಲೇ ರದ್ದುಪಡಿಸಿ ಆ ಸಾಲಿನ ಗುತ್ತಿಗೆ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಲ್ಲದೇ ಸಂಬಂಧಪಟ್ಟ ಗುತ್ತಿಗೆದಾರರನ್ನು ಕಪ್ಪುಪಟ್ಟಿಗೆ ಸೇರ್ಪಡಿಸಿ ಅವರಿಗೆ ಮೀನುಗಾರಿಕೆ ಇಲಾಖೆಯಿಂದ ಯಾವುದೇ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಮುಂದಕ್ಕೆ ನೀಡಲಾಗುವುದಿಲ್ಲ.

ಜ.ಜಯಣ್ಣ
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ

ಅನುಬಂಧ-5

**ಒಳನಾಡು ಜಲಸಂಪನ್ಮೂಲಗಳಲ್ಲಿನ ಮೀನು ಪಾಶುವಾರು ಹಕ್ಕನ್ನು ಮೀನುಗಾರಿಕೆ ಇಲಾಖೆಯಿಂದ ಟೆಂಡರ್-ಕಂ-ಹರಾಜು ಮುಖಾಂತರ ವಿಲೇವಾರಿ ಮಾಡುವಾಗ ಮೀನುಗಾರಿಕೆ ಅಧಿಕಾರಿಗಳು ಕಡ್ಡಾಯವಾಗಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಮಾರ್ಗಸೂಚಿಗಳು**

1. ಎಲ್ಲೆಲ್ಲಿ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಪಡೆಯಲು ಆದ್ಯತೆಯಲ್ಲಿನ ಮೀನುಗಾರರ ಸಹಕಾರ ಸಂಘಗಳು ಮುಂದೆ ಬರುವುದಿಲ್ಲವೋ ಆ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಟೆಂಡರ್-ಕಂ-ಹರಾಜು ಮೂಲಕ ವಿಲೇವಾರಿ ಮಾಡಲು ಟೆಂಡರ್ ಮತ್ತು ಹರಾಜು ಪ್ರಕಟಣೆಯನ್ನು ಸಂಬಂಧಪಟ್ಟ ತಾಲ್ಲೂಕು ಮೀನುಗಾರಿಕೆ ಅಧಿಕಾರಿಯು ಹೊರಡಿಸತಕ್ಕದ್ದು. ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡಲು ಉದ್ದೇಶಿಸಲಾದ ಒಳನಾಡು ಜಲಸಂಪನ್ಮೂಲಗಳ ಟೆಂಡರ್ / ಹರಾಜು ಪ್ರಕಟಣೆಗಳನ್ನು ಈ ಆದೇಶದ ಅನುಬಂಧ-12ರಲ್ಲಿನಂತೆ ಸ್ಥಳೀಯ ದಿನಪತ್ರಿಕೆಗಳಲ್ಲಿ ಪ್ರಕಟಿಸಿ ಪ್ರಕಟಣೆಯ ಕರಪತ್ರಗಳನ್ನು ಕೆರೆಯ ವ್ಯಾಪ್ತಿಯ ಗ್ರಾಮ ಪಂಚಾಯತ್‌ಗಳ, ತಾಲ್ಲೂಕು ಪಂಚಾಯತ್, ತಾಲ್ಲೂಕಿನ ತಹಶೀಲ್ದಾರವರ ಕಛೇರಿಯ ಮತ್ತು ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿ ಕಛೇರಿಯ ಜಾಹೀರಾತು ಫಲಕಗಳಲ್ಲಿ ಪ್ರದರ್ಶಿಸುವ ವ್ಯವಸ್ಥೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು. ಟೆಂಡರ್ ಪ್ರಕಟಣೆಯನ್ನು ಕೆರೆಯ ವ್ಯಾಪ್ತಿಯ ಗ್ರಾಮ/ಗ್ರಾಮಗಳಲ್ಲಿ ಸಾರ್ವಜನಿಕರಿಗೆ ವ್ಯಾಪಕವಾಗಿ ಹರಾಜು ಇಸ್ತಿಹಾರ್ ಹಂಚಿಸುವ ಹಾಗೂ ಟಾಮ್ ಟಾಮ್ ಮಾಡಿಸುವ ವ್ಯವಸ್ಥೆಯನ್ನು ಕಡ್ಡಾಯವಾಗಿ ಮಾಡಬೇಕು.

2. ಸಂಬಂಧಪಟ್ಟ ತಾಲ್ಲೂಕು ಮೀನುಗಾರಿಕೆ ಅಧಿಕಾರಿಯು ಟೆಂಡರ್-ಕಂ-ಹರಾಜು ಪ್ರಕಟಣೆಯನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳ ಕಾಲಾವಕಾಶ ನೀಡಿ ಟೆಂಡರ್-ಕಂ-ಹರಾಜನ್ನು ನಡೆಸತಕ್ಕದ್ದು. ನೀರು ತುಂಬಿದ ಒಳನಾಡು ಜಲಸಂಪನ್ಮೂಲಗಳ ಸರ್ವೇಕ್ಷಣೆ ನಡೆಸಿ ಅವುಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಯನ್ನು ಮೂರು ಸುತ್ತಿನಲ್ಲಿ ನಡೆಸತಕ್ಕದ್ದು. ಪೂರ್ಣವಾಗಿ ಅಥವಾ ಅರ್ಧಕ್ಕಿಂತ ಹೆಚ್ಚು ತುಂಬಿದ ಕೆರೆಗಳನ್ನು ಮೊದಲನೇ ಸುತ್ತಿನಲ್ಲಿ ಅಂದರೆ ಮೀನುಗಾರಿಕೆ ಫಸಲಿ ವರ್ಷದ ಮೇ-ಜೂನ್ ತಿಂಗಳಿನಲ್ಲಿ, ಎರಡನೇ ಸುತ್ತನ್ನು ಜುಲೈ-ಆಗಸ್ಟ್ ತಿಂಗಳಿನಲ್ಲಿ ಮತ್ತು ಮೂರನೇ ಹಾಗೂ ಅಂತಿಮ ಸುತ್ತನ್ನು ಸೆಪ್ಟೆಂಬರ್-ಅಕ್ಟೋಬರ್ ತಿಂಗಳಿನಲ್ಲಿ ನಡೆಸತಕ್ಕದ್ದು. 3ನೇ ಸುತ್ತಿನ ನಂತರ ವಿಲೇವಾರಿಯಾಗದ ಕೆರೆಗಳ ಪಟ್ಟಿಯನ್ನು ತಯಾರು ಮಾಡಿ ವಿಲೇವಾರಿಯಿಂದ ವಿನಾಯಿತಿ ಆದೇಶವನ್ನು ಮೀನುಗಾರಿಕೆ ನಿರ್ದೇಶಕರಿಂದ ಪಡೆಯಲು ಸೂಕ್ತ ಸಮರ್ಥನೆಯೊಂದಿಗೆ ಪ್ರಸ್ತಾವನೆಯನ್ನು ಈ ಆದೇಶದ ಅನುಬಂಧ-7ರ ನಮೂನೆಯಲ್ಲಿ ಸಲ್ಲಿಸತಕ್ಕದ್ದು. ಎಲ್ಲಾ ಜಲಸಂಪನ್ಮೂಲಗಳ ವಿಲೇವಾರಿ ಪ್ರಕ್ರಿಯೆಯನ್ನು ಮೀನುಗಾರಿಕೆ ಫಸಲಿ ವರ್ಷ ಪ್ರಾರಂಭವಾದ 4 ತಿಂಗಳೊಳಗಾಗಿ ಅಂದರೆ ಮೀನುಗಾರಿಕೆ ಫಸಲಿ ವರ್ಷದ ಅಕ್ಟೋಬರ್ ಮಾಹೆಯ ಅಂತ್ಯದೊಳಗಾಗಿ ಕಡ್ಡಾಯವಾಗಿ ಪೂರ್ಣಗೊಳಿಸತಕ್ಕದ್ದು.

3. ಟೆಂಡರ್-ಕಂ-ಹರಾಜಿನ ಮೂಲಕ ಮೀನು ಪಾಶುವಾರು ಹಕ್ಕಿನ ಗುತ್ತಿಗೆಯನ್ನು ಪಡೆಯಲು ಇಚ್ಛಿಸುವವರು ಈ ಆದೇಶದ ಅನುಬಂಧ-13ರಲ್ಲಿನಂತೆ ಅಧಿಕೃತ ಟೆಂಡರ್ ಅರ್ಜಿ ನಮೂನೆಯನ್ನು ಸಂಬಂಧಪಟ್ಟ ತಾಲ್ಲೂಕಿನ ಮೀನುಗಾರಿಕೆ ಅಧಿಕಾರಿಯವರಿಂದ ಕಛೇರಿ ವೇಳೆಯಲ್ಲಿ ಅರ್ಜಿಯ ಶುಲ್ಕ ರೂ.100-00ನ್ನು (ರೂಪಾಯಿ ಒಂದು ನೂರು ಮಾತ್ರ) ಪಾವತಿಸಿ ಪಡೆದುಕೊಳ್ಳತಕ್ಕದ್ದು.

4. ಟೆಂಡರ್ ಹಾಗೂ ಹರಾಜಿನಲ್ಲಿ ಭಾಗವಹಿಸುವವರು ಮೀನುಗಾರಿಕೆ ಇಲಾಖೆಯು ನಿಗದಿಪಡಿಸಿದ ಭದ್ರತಾ ಠೇವಣಿಯನ್ನು ನಗದು ಹುಂಡಿ (ಡಿ.ಡಿ.) ಮೂಲಕ ಮಾತ್ರ ಪಾವತಿಸಿ ಟೆಂಡರ್ ಹಾಗೂ ಹರಾಜಿನಲ್ಲಿ ಭಾಗವಹಿಸಬಹುದು. ಟೆಂಡರ್‌ನಲ್ಲಿ ಭಾಗವಹಿಸಿರುವವರೂ ಸಹ ಭದ್ರತಾ ಠೇವಣಿ ಮೊತ್ತವನ್ನು ಮತ್ತೆ ಪಾವತಿಸದೆ ಹರಾಜಿನಲ್ಲಿ ಭಾಗವಹಿಸಬಹುದು. ಆದರೆ, ಟೆಂಡರ್‌ನಲ್ಲಿ ಭಾಗವಹಿಸದೆ ಬರೀ ಹರಾಜಿನಲ್ಲಿ ಭಾಗವಹಿಸುವವರು, ಹರಾಜು ಪ್ರಕ್ರಿಯೆ ಪ್ರಾರಂಭದ ಮುನ್ನ ಭದ್ರತಾ ಠೇವಣಿ ಮೊತ್ತವನ್ನು ನಗದುಹುಂಡಿ ಮೂಲಕ ಮಾತ್ರ ಪಾವತಿಸಿ ಭಾಗವಹಿಸಬಹುದು. ಈ ಭದ್ರತಾ ಠೇವಣಿ ಮೊತ್ತವನ್ನು ಆಯಾ ಜಲಸಂಪನ್ಮೂಲದ ಉಪಯುಕ್ತತಾ ಜಲವಿಸ್ತೀರ್ಣದ ಶೇ.15ರಷ್ಟು ವಿಸ್ತೀರ್ಣವನ್ನು ಗಣನೆಗೆ ತೆಗೆದುಕೊಂಡು ಪ್ರತಿ ಹೆಕ್ಟೇರಿಗೆ ರೂ.500.00ರಂತೆ (ರೂಪಾಯಿ ಐನೂರು ಮಾತ್ರ) ನಿಗದಿಪಡಿಸತಕ್ಕದ್ದು. ಯಶಸ್ವಿ ಬಿಡ್‌ದಾರರ ಭದ್ರತಾ ಠೇವಣಿ ಮೊತ್ತವನ್ನು ಬಡ್ಡಿರಹಿತವಾಗಿ ಗುತ್ತಿಗೆಯ ಅವಧಿಯು ಮುಗಿದನಂತರ ಅವರಿಗೆ ರೀಫಂಡ್ ಬಿಲ್ ಮುಖಾಂತರ ಮರುಪಾವತಿಸತಕ್ಕದ್ದು. ಒಂದು ವೇಳೆ ಆಖೈರಾದ ಬಿಡ್‌ದಾರರು ಗುತ್ತಿಗೆ ಮೊತ್ತ ಪಾವತಿಸದಿದ್ದಲ್ಲಿ ಅಥವಾ ಗುತ್ತಿಗೆ ಅವಧಿಯಲ್ಲಿ ಇಲಾಖಾ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ಅವರ ಭದ್ರತಾ ಠೇವಣಿ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು. ಯಶಸ್ವಿಯಾಗದ ಟೆಂಡರ್‌ದಾರರ/ಬಿಡ್‌ದಾರರ ಠೇವಣಿ ಮೊತ್ತದ ನಗದು ಹುಂಡಿಗಳನ್ನು ಅವರಿಗೆ ಅಂದೇ ಹಿಂದಿರುಗಿಸಿ ಸ್ವೀಕೃತಿ ಪಡೆದುಕೊಳ್ಳುವುದು.

5. ಮೀನು ಪಾಶುವಾರು ಹಕ್ಕನ್ನು ಪಡೆಯಲು ಟೆಂಡರ್ ಅರ್ಜಿ ಸಲ್ಲಿಸುವವರು ಈ ಆದೇಶದ ಅನುಬಂಧ-13ರಲ್ಲಿರುವ ನಿಗದಿತ ನಮೂನೆಯ ಟೆಂಡರ್ ಅರ್ಜಿಯನ್ನು ಹಾಗೂ ಭದ್ರತಾ ಠೇವಣಿಯ ನಗದು ಹುಂಡಿಯನ್ನು ಮೊಹರು ಮಾಡಿದ ಪ್ರತ್ಯೇಕ ಲಕೋಟೆಗಳಲ್ಲಿ ಸಂಬಂಧಪಟ್ಟ ತಾಲ್ಲೂಕು ಮೀನುಗಾರಿಕೆ ಅಧಿಕಾರಿಗೆ ನಿಗದಿತ ದಿನಾಂಕದೊಳಗಾಗಿ ಕಛೇರಿ ವೇಳೆಯಲ್ಲಿ ಸಲ್ಲಿಸತಕ್ಕದ್ದು. ಮೊಹರಾದ ಲಕೋಟೆಯ ಮೇಲೆ ಕೆರೆಯ ಹೆಸರಿನೊಂದಿಗೆ ಮೀನು ಪಾಶುವಾರು ಹಕ್ಕನ್ನು ಪಡೆಯಲು ಟೆಂಡರ್ ಅರ್ಜಿಯೆಂದು ದಪ್ಪ ಅಕ್ಷರಗಳಲ್ಲಿ ನಮೂದಿಸಿರತಕ್ಕದ್ದು.

6. ಟೆಂಡರ್-ಕಂ-ಹರಾಜನ್ನು ನಡೆಸುವ ವಿಧಾನ:

ಮೊದಲು ಕೆರೆವಾರು ಹರಾಜನ್ನು ನಡೆಸುವುದು, ನಂತರ ಕೆರೆವಾರು ಟೆಂಡರ್ ಅರ್ಜಿಗಳನ್ನು ತೆರೆಯುವುದು. ಆ ಕೆರೆಗೆ ಟೆಂಡರ್ ಅರ್ಜಿಗಳಲ್ಲಿ ನಮೂದಿಸಿರುವ ಅತಿ ಹೆಚ್ಚಿನ ಮೊತ್ತ ಅಥವಾ ಹರಾಜಿನಲ್ಲಿ ಸೂಚಿಸಿರುವ ಅತಿ ಹೆಚ್ಚಿನ ಬಿಡ್ ಮೊತ್ತ ಈ ಎರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತವನ್ನು ವಾರ್ಷಿಕ ಗುತ್ತಿಗೆ ಮೊತ್ತವೆಂದು ಪರಿಗಣಿಸತಕ್ಕದ್ದು.

7. ಸರ್ಕಾರಿ ಸವಾಲು:

ಸಂಬಂಧಿಸಿದ ಜಲಸಂಪನ್ಮೂಲದ ಹಿಂದಿನ ವರ್ಷದ ಆದಾಯದ ಶೇ.50ರಷ್ಟು ಮೊತ್ತವನ್ನು ಸರ್ಕಾರಿ ಸವಾಲು ಅಥವಾ ಕನಿಷ್ಠ ಬಿಡ್ ಮೊತ್ತವೆಂದು ಪರಿಗಣಿಸುವುದು. ಆಖೈರಾದ ಬಿಡ್ / ಟೆಂಡರ್ ಮೊತ್ತವು ಸರ್ಕಾರಿ ಸವಾಲಿಗಿಂತ ಕಡಿಮೆ ಇದ್ದಲ್ಲಿ ಅಂತಹ ಟೆಂಡರ್-ಕಂ-ಹರಾಜು ಪ್ರಕ್ರಿಯೆಯನ್ನು ತಾಲ್ಲೂಕು ಮೀನುಗಾರಿಕೆ ಅಧಿಕಾರಿಯೇ ರದ್ದುಗೊಳಿಸಿ ಮರುವಿಲೇವಾರಿಗೆ ಕ್ರಮ ಕೈಗೊಳ್ಳತಕ್ಕದ್ದು. 2ನೇ ಬಾರಿಯೂ ಸಹ ಆಖೈರಾದ ಬಿಡ್ ಮೊತ್ತ ಸರ್ಕಾರಿ ಸವಾಲಿಗಿಂತ ಕಡಿಮೆ ಇದ್ದಲ್ಲಿ ಟೆಂಡರ್/ಹರಾಜನ್ನು ರದ್ದುಗೊಳಿಸಿ 3ನೇ ಬಾರಿಗೆ ಮರುವಿಲೇಗೊಳಿಸುವುದು. 3ನೇ ಬಾರಿಗೆ ಆಖೈರಾದ ಬಿಡ್ /ಟೆಂಡರ್ ಮೊತ್ತವನ್ನು ಒಪ್ಪಿಕೊಳ್ಳುವುದು.

8. ಮೀನು ಪಾಶುವಾರು ಹಕ್ಕಿನ ಟೆಂಡರ್/ಹರಾಜು ಮುಗಿದ ಕೂಡಲೇ ಅತೀ ಹೆಚ್ಚಿನ ಮೊತ್ತವನ್ನು ಸೂಚಿಸಿದ ಯಶಸ್ವಿ ಟೆಂಡರುದಾರರು/ಬಿಡ್ಡುದಾರರು ಪೂರ್ಣ ಬಿಡ್ ಮೊತ್ತವನ್ನು ಹರಾಜು ನಡೆದ ಸ್ಥಳದಲ್ಲಿಯೇ ಪಾವತಿ ಮಾಡಿ ಸಂಬಂಧಪಟ್ಟ ತಾಲ್ಲೂಕು ಮೀನುಗಾರಿಕೆ ಅಧಿಕಾರಿಯಿಂದ ಅಧಿಕೃತ ರಸೀದಿಯನ್ನು ಪಡೆದುಕೊಳ್ಳತಕ್ಕದ್ದು. ತಪ್ಪಿದಲ್ಲಿ ಸದರಿ ಟೆಂಡರ್-ಕಂ-ಹರಾಜಿನ ಬಗ್ಗೆ ಅವರು ನೀಡಲಾಗಿದ್ದ ಭದ್ರತಾ ಠೇವಣಿಯ ಮೊಬಲಗನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು. ಆದರೆ, ಆಖೈರಾದ ಗರಿಷ್ಠ ಬಿಡ್ ಮೊತ್ತವನ್ನು 2ನೇ ಅತೀ ಹೆಚ್ಚಿನ ಮೊತ್ತವನ್ನು ಸೂಚಿಸಿದ ಟೆಂಡರ್‌ದಾರರು / ಬಿಡ್‌ದಾರರು ಪಾವತಿಸಲು ಒಪ್ಪಿದಲ್ಲಿ ಹಾಗೂ ಅವರು ಸದರಿ ಮೊತ್ತವನ್ನು ಸ್ಥಳದಲ್ಲೇ ಪಾವತಿಸಿದಲ್ಲಿ ಅವರ ಹೆಸರಿಗೆ ಸದರಿ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ವಿಲೇಗೊಳಿಸಲು ಸಂಬಂಧಪಟ್ಟ ತಾಲ್ಲೂಕು ಮೀನುಗಾರಿಕೆ ಅಧಿಕಾರಿ ಕ್ರಮ ಕೈಗೊಳ್ಳತಕ್ಕದ್ದು. ಒಂದು ವೇಳೆ 2ನೇ ಅತೀ ಹೆಚ್ಚಿನ ಟೆಂಡರುದಾರರು/ಬಿಡ್‌ದಾರರು ಇದಕ್ಕೆ ಒಪ್ಪದಿದ್ದಲ್ಲಿ ಜಿಲ್ಲಾ ಮೀನುಗಾರಿಕಾ ಅಧಿಕಾರಿಯ ಅನುಮೋದನೆ ಪಡೆದು ಮರು ಟೆಂಡರ್-ಕಂ-ಹರಾಜು ಮೂಲಕ ಮರುವಿಲೇವಾರಿ ಗೊಳಿಸಲು ಸಂಬಂಧಪಟ್ಟ ತಾಲ್ಲೂಕು ಮೀನುಗಾರಿಕೆ ಅಧಿಕಾರಿ ಕ್ರಮಕೈಗೊಳ್ಳತಕ್ಕದ್ದು.

9. ಟೆಂಡರ್-ಕಂ-ಹರಾಜಿನ ಮುಖಾಂತರ ವಿಲೇಗೊಳಿಸಲಾದ ಮೀನು ಪಾಶುವಾರು ಹಕ್ಕಿನ ದೃಢೀಕರಣವು ಮೇಲಾಧಿಕಾರಿಗಳ ಅನುಮೋದನೆಗೆ ಒಳಪಟ್ಟಿರುತ್ತದೆ.

10. ಟೆಂಡರ್/ಹರಾಜು ಪ್ರಕ್ರಿಯೆ ಮುಗಿದ ಒಂದು ವಾರದೊಳಗಾಗಿ ತಾಲ್ಲೂಕು ಮೀನುಗಾರಿಕೆ ಅಧಿಕಾರಿಯು ಹರಾಜು ದೃಢೀಕರಣ ಆದೇಶ ಪಡೆಯಲು ಎಲ್ಲಾ ದಾಖಲಾತಿಗಳೊಂದಿಗೆ ಸೂಕ್ತ ಪ್ರಸ್ತಾವನೆಯನ್ನು (ಈ ಆದೇಶದ ಅನುಬಂಧ-18ರಲ್ಲಿನ ಚೆಕ್‌ಲಿಸ್ಟ್‌ನೊಂದಿಗೆ) ಮೇಲಾಧಿಕಾರಿಗೆ ಸಲ್ಲಿಸತಕ್ಕದ್ದು. ಟೆಂಡರ್/ಹರಾಜು ದೃಢೀಕರಣ ಆದೇಶ ಕೋರಿ ಬಂದ ಪ್ರಸ್ತಾವನೆಗಳನ್ನು ಒಂದು ವಾರದೊಳಗಾಗಿ ಜಿಲ್ಲಾ ಮೀನುಗಾರಿಕೆ ಅಧಿಕಾರಿಗಳು ಮತ್ತು ವಲಯ ಮಟ್ಟದ ಮೀನುಗಾರಿಕೆ ಅಧಿಕಾರಿಗಳು ಅವರ ಅಧಿಕಾರ ವ್ಯಾಪ್ತಿಯಲ್ಲಿ ಗುತ್ತಿಗೆ ಆದೇಶವನ್ನು ಹೊರಡಿಸುವುದು. ಅಧಿಕಾರ ವ್ಯಾಪ್ತಿ ಮೀರಿದ ಪ್ರಸ್ತಾವನೆಗಳನ್ನು ಅವರ ಕಛೇರಿಗೆ ತಲುಪಿದ ಒಂದು ವಾರದೊಳಗಾಗಿ ಅವರ ಮೇಲಾಧಿಕಾರಿಗೆ ಸಲ್ಲಿಸುವುದು. ಪ್ರಾರಂಭದಲ್ಲೇ ತಾಲ್ಲೂಕು ಮೀನುಗಾರಿಕೆ ಅಧಿಕಾರಿಗಳು ಪ್ರಸ್ತಾವನೆಯೊಡನೆ ಸಲ್ಲಿಸಬೇಕಾದ ಎಲ್ಲಾ ದಾಖಲಾತಿಗಳು ಚೆಕ್‌ಲಿಸ್ಟ್‌ಗಳನ್ನು ಪರಿಶೀಲಿಸಿಕೊಂಡು ಪೂರ್ಣ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು. ಅಪೂರ್ಣ ಪ್ರಸ್ತಾವನೆ ಸಲ್ಲಿಸುವ ತಾಲ್ಲೂಕು ಮೀನುಗಾರಿಕೆ ಅಧಿಕಾರಿಯ ಮೇಲೆ ಕರ್ತವ್ಯ ನಿರ್ಲಕ್ಷತೆಯ ಆರೋಪ ಹೊರಿಸಿ ಶಿಸ್ತು ಕ್ರಮ ಜರುಗಿಸುವುದು.

11. ಟೆಂಡರ್-ಕಂ-ಹರಾಜು ಮುಖಾಂತರ ಪಡೆದ ಮೀನು ಪಾಶುವಾರು ಹಕ್ಕಿನ ಗುತ್ತಿಗೆ ಅವಧಿಯಲ್ಲಿ 2ನೇ ವರ್ಷದಿಂದ ಪ್ರತಿವರ್ಷ ಗುತ್ತಿಗೆಯನ್ನು ನವೀಕರಿಸುವ ಅಧಿಕಾರವನ್ನು ಜಿಲ್ಲಾ ಮೀನುಗಾರಿಕೆ ಅಧಿಕಾರಿಗೆ ಪ್ರತ್ಯಾಯೋಜಿಸಲಾಗಿದೆ. ಎರಡನೇ ವರ್ಷ ಮತ್ತು ತದನಂತರದ ವಾರ್ಷಿಕ

ಟೆಂಡರ್/ಬಿಡ್ ಮೊತ್ತವನ್ನು ಬಿಡ್‌ದಾರರು ಮೀನುಗಾರಿಕೆ ಫಸಲಿ ವರ್ಷದ ಪ್ರಾರಂಭದ ಮುನ್ನ ಅಂದರೆ ಏಪ್ರಿಲ್ 30ರೊಳಗಾಗಿ ಪಾವತಿ ಮಾಡಿ ಗುತ್ತಿಗೆಯನ್ನು ನವೀಕರಿಸಿಕೊಳ್ಳತಕ್ಕದ್ದು. ಏಪ್ರಿಲ್ ತಿಂಗಳ ಮೊದಲನೇ ವಾರದಲ್ಲಿ ಬಿಡ್‌ದಾರರಿಗೆ ಬಿಡ್ ಮೊತ್ತದ ಬೇಡಿಕೆ ನೋಟೀಸನ್ನು "ನೋಂದಣಿ ಅಂಚೆ ಸ್ವೀಕೃತಿ ಬಾಕಿ" ಮುಖಾಂತರ ರವಾನಿಸುವುದು. ಈ ನೋಟೀಸ್ ನೀಡಿದ ನಂತರವೂ ಬಿಡ್‌ದಾರರು ನಿಗದಿತ ಅವಧಿಯೊಳಗಾಗಿ ಗುತ್ತಿಗೆ ಮೊತ್ತವನ್ನು ಪಾವತಿಸಿ ನವೀಕರಿಸಿಕೊಳ್ಳದಿದ್ದಲ್ಲಿ ಹಾಗೂ ಇಲಾಖಾ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದ ಪಕ್ಷದಲ್ಲಿ ಅವರ ಹರಾಜು ದೃಢೀಕರಣ ಆದೇಶವನ್ನು ರದ್ದುಪಡಿಸುವ ಅಧಿಕಾರವನ್ನು ಗುತ್ತಿಗೆ ದೃಢೀಕರಿಸಿದ ಸಕ್ಷಮ ಪ್ರಾಧಿಕಾರ / ಮೀನುಗಾರಿಕೆ ನಿರ್ದೇಶಕರು ಹೊಂದಿರುತ್ತಾರೆ. ಸದರಿ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಮರುವಿಲೇವಾರಿಗೊಳಿಸುವ ಅಧಿಕಾರವನ್ನು ಜಿಲ್ಲಾ ಮೀನುಗಾರಿಕೆ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಿದೆ. ಹಿಂದಿನ ಗುತ್ತಿಗೆ ಆದೇಶವನ್ನು ರದ್ದುಪಡಿಸಿದ ನಂತರವೇ ಹೊಸ ಗುತ್ತಿಗೆ ಆದೇಶವನ್ನು ಸಕ್ಷಮ ಪ್ರಾಧಿಕಾರ ನೀಡುವುದು.

12. ಟೆಂಡರ್-ಕಂ-ಹರಾಜು ಮುಖಾಂತರ ಗುತ್ತಿಗೆಗೆ ಪಡೆದ ಮೀನು ಪಾಶುವಾರು ಹಕ್ಕನ್ನು ಯಾವುದೇ ಕಾರಣಕ್ಕಾಗಿ ವರ್ಗಾಯಿಸತಕ್ಕದ್ದಲ್ಲ. ಹಾಗೂ ಉಪ ಗುತ್ತಿಗೆಗೆ ನೀಡತಕ್ಕದ್ದಲ್ಲ. ಒಂದು ಪಕ್ಷ ವರ್ಗಾಯಿಸಿದ್ದಲ್ಲಿ ಅಥವಾ ಉಪ ಗುತ್ತಿಗೆಗೆ ನೀಡಿರುವುದು ದಾಖಲೆಗಳಿಂದ ದೃಢಪಟ್ಟಲ್ಲಿ ಗುತ್ತಿಗೆ ಆದೇಶವನ್ನು ಸಕ್ಷಮ ಪ್ರಾಧಿಕಾರ ರದ್ದುಗೊಳಿಸುವುದು.

13. ಟೆಂಡರ್‌ದಾರರು/ಬಿಡ್‌ದಾರರು ಮೀನು ಪಾಶುವಾರು ಹಕ್ಕಿನ ಗುತ್ತಿಗೆಯನ್ನು ಪಡೆದ ಜಲಸಂಪನ್ಮೂಲಗಳಲ್ಲಿ ಪ್ರತಿ ಹೆಕ್ಟೇರು ಉಪಯುಕ್ತತಾ ಜಲವಿಸ್ತೀರ್ಣಕ್ಕೆ ಕನಿಷ್ಟ 2000 ಬಲಿತ ಮೀನುಮರಿಗಳನ್ನು (70-80 ಎಂ.ಎಂ.)(ಮೀನುಗಾರಿಕೆ ಇಲಾಖೆಯಿಂದ ಅನುಮೋದಿತ ತಳಿಯ) ಮಾತ್ರ ಮೀನುಗಾರಿಕೆ ಇಲಾಖೆಯ ಅಥವಾ ಮೀನುಗಾರಿಕೆ ಇಲಾಖೆಯಿಂದ ಅನುಮೋದಿಸಲ್ಪಟ್ಟ ಮೀನುಮರಿ ಉತ್ಪಾದನಾ / ಪಾಲನಾ ಕೇಂದ್ರಗಳಿಂದ ಖರೀದಿಸಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಅಧಿಕಾರಿಯ ಸಮ್ಮುಖದಲ್ಲಿ ಬಿತ್ತನೆ ಮಾಡತಕ್ಕದ್ದು. ಬಿತ್ತನೆ ಮಾಡಿರುವ ಬಗ್ಗೆ ಪ್ರತಿವರ್ಷ ಫೋಟೋ ದೃಢೀಕರಣವನ್ನು ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿಗಳಿಗೆ ನೀಡತಕ್ಕದ್ದು.

14. ಯಾವುದೇ ಅಥವಾ ಎಲ್ಲಾ ಟೆಂಡರ್-ಕಂ-ಹರಾಜು ಪ್ರಸ್ತಾವನೆಗಳನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವು ಸಂಬಂಧಪಟ್ಟ ಇಲಾಖಾ ಅಧಿಕಾರಿಗಳಿಗೆ / ಸರ್ಕಾರಕ್ಕೆ ಇರುತ್ತದೆ. ಯಾವುದೇ ಕಾರಣ ನೀಡದೆ ಟೆಂಡರ್ / ಹರಾಜನ್ನು ತಿರಸ್ಕರಿಸಿ ಮರು ಟೆಂಡರ್ / ಹರಾಜು ಮಾಡುವ ಹಕ್ಕು ಮೀನುಗಾರಿಕೆ ಇಲಾಖೆಗೆ ಸೇರಿಗುತ್ತದೆ.

15. ಟೆಂಡರ್/ ಹರಾಜು ಮುಖಾಂತರ ಗುತ್ತಿಗೆಗೆ ಪಡೆದ ಜಲಸಂಪನ್ಮೂಲಗಳಲ್ಲಿ ಗುತ್ತಿಗೆದಾರರು ಡೈನಮೈಟ್, ಸಿಡಿಮದ್ದು, ವಿಷ ಅಥವಾ ರಾಸಾಯನಿಕ ವಸ್ತುಗಳನ್ನು ಪ್ರಯೋಗಿಸಿ ಮೀನು ಹಿಡಿಯತಕ್ಕದ್ದಲ್ಲ. ಈ ನಿಬಂಧನೆಯನ್ನು ಉಲ್ಲಂಘಿಸಿದ ಟೆಂಡರುದಾರರ / ಬಿಡ್ಡುದಾರರ ಗುತ್ತಿಗೆಯನ್ನು ತತ್‌ಕ್ಷಣದಿಂದ ರದ್ದುಪಡಿಸಿ ಭದ್ರತಾ ಠೇವಣಿ ಮೊತ್ತ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು.

16. ಒಳನಾಡು ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಟೆಂಡರ್ / ಹರಾಜು ಮುಖಾಂತರ ಗುತ್ತಿಗೆಗೆ ಪಡೆದ ಯಾವುದೇ ಟೆಂಡರುದಾರರು / ಬಿಡ್‌ದಾರರು ನಿಷೇಧಿತ ಮೀನುಗಳಾದ ಪ್ರಮುಖವಾಗಿ ಆಫ್ರಿಕನ್ ಕ್ಯಾಟ್‌ಫಿಶ್ (ಆಣೆ ಮೀನು), ಚೈನೀಸ್ ಬಿಗ್ ಹೆಡ್, ಇತ್ಯಾದಿಗಳನ್ನು ಬಿತ್ತನೆ ಮಾಡುವುದು ಅಥವಾ ಅಭಿವೃದ್ಧಿಪಡಿಸುವುದು ಅಥವಾ ಮಾರಾಟ ಮಾಡುವುದು ಕಂಡುಬಂದಲ್ಲಿ ಅವರಿಗೆ ನೀಡಲಾಗಿದ್ದ ಗುತ್ತಿಗೆಯನ್ನು ಕೂಡಲೇ ರದ್ದುಪಡಿಸುವ ಮತ್ತು ಆ ಸಾಲಿನ ಗುತ್ತಿಗೆ ಮೊತ್ತ ಮತ್ತು ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಅಧಿಕಾರವನ್ನು ಮೀನುಗಾರಿಕೆ ಇಲಾಖೆ ಹೊಂದಿರುತ್ತದೆ. ಟೆಂಡರುದಾರರಿಂದ / ಬಿಡ್‌ದಾರರಿಂದ ಈ ನಿಷೇಧಿತ ಮೀನುಮರಿಗಳ ಅಭಿವೃದ್ಧಿ, ಪಾಲನೆ ಮತ್ತು ಮಾರಾಟ ಮಾಡುವುದು ಕಂಡುಬಂದಲ್ಲಿ ಸಂಬಂಧಪಟ್ಟ ಗುತ್ತಿಗೆದಾರರನ್ನು ಕಪ್ಪುಪಟ್ಟಿಗೆ ಸೇರ್ಪಡಿಸಿ ಅವರಿಗೆ ಮೀನುಗಾರಿಕೆ ಇಲಾಖೆಯಿಂದ ಯಾವುದೇ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಮುಂದಕ್ಕೆ ನೀಡಲಾಗುವುದಿಲ್ಲ.

17. ಟೆಂಡರುದಾರರು / ಗುತ್ತಿಗೆದಾರರು ಗುತ್ತಿಗೆ ಪಡೆದ ಜಲಸಂಪನ್ಮೂಲಗಳಲ್ಲಿ ಮೀನುಗಾರಿಕೆ ಚಟುವಟಿಕೆಯನ್ನು ಕೈಗೊಳ್ಳುವಾಗ ಸದರಿ ಜಲಸಂಪನ್ಮೂಲದ ಕಟ್ಟೆ, ಏರಿ, ತೂಬು, ಮುಂತಾದವುಗಳಿಗೆ ಯಾವುದೇ ರೀತಿಯ ಹಾನಿ ಉಂಟಾಗದಂತೆ ನೋಡಿಕೊಳ್ಳತಕ್ಕದ್ದು. ಹಾನಿಯುಂಟಾದಲ್ಲಿ ಟೆಂಡರ್/ಬಿಡ್‌ದಾರರ ಮೇಲೆ ಕ್ರಮವಹಿಸತಕ್ಕದ್ದು.

18. ಮೀನುಗಾರಿಕೆ ಇಲಾಖೆಯ ವ್ಯಾಪ್ತಿಯಲ್ಲಿನ ಒಳನಾಡು ಜಲಸಂಪನ್ಮೂಲಗಳಲ್ಲಿನ ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಪಟ್ಟಂತೆ ರೂಪಿಸಲಾಗಿರುವ ಯಾವುದೇ ನಿಯಮವನ್ನು ಉಲ್ಲಂಘಿಸಿದ ಟೆಂಡರುದಾರರ / ಗುತ್ತಿದಾರರ ಗುತ್ತಿಗೆಯನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಸಕ್ಷಮ ಪ್ರಾಧಿಕಾರವು ರದ್ದುಪಡಿಸತಕ್ಕದ್ದು. ಹಾಗೂ ಸರ್ಕಾರವು / ಮೀನುಗಾರಿಕೆ ನಿರ್ದೇಶಕರು ಸದರಿ ವಿಷಯಕ್ಕೆ ಸಂಬಂಧಿಸಿದಂತೆ ಕಾಲಕಾಲಕ್ಕೆ ವಿಧಿಸಬಹುದಾದ ಹೆಚ್ಚುವರಿ ಷರತ್ತು ಮತ್ತು ನಿಬಂಧನೆಗಳಿಗೆ ಗುತ್ತಿಗೆದಾರರು / ಟೆಂಡರುದಾರರು ಬದ್ಧರಾಗಿರತಕ್ಕದ್ದು. ಈ ದಿಶೆಯಲ್ಲಿ ಈ ಆದೇಶದ ಅನುಬಂಧ-15ರಲ್ಲಿನ ನಮೂನೆಯಲ್ಲಿರುವಂತೆ ಮುಚ್ಚಳಿಕೆ ಪತ್ರವನ್ನು ರೂ.200-00ರ ಮೌಲ್ಯದ ಛಾಪಾ ಕಾಗದದಲ್ಲಿ ಟೆಂಡರುದಾರರಿಂದ / ಗುತ್ತಿಗೆದಾರರಿಂದ ಸಂಬಂಧಪಟ್ಟ ತಾಲ್ಲೂಕು ಮೀನುಗಾರಿಕೆ ಅಧಿಕಾರಿಗಳು ಪಡೆದುಕೊಳ್ಳತಕ್ಕದ್ದು.

ಜಿ.ಜಯಣ್ಣ

ಸರ್ಕಾರದ ಅಧೀನ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ ಅನುಬಂಧ-6

ನದಿಗಳಲ್ಲಿ / ಜಲಾಶಯಗಳಲ್ಲಿ ಮತ್ತು ಅಳಿವೆಗಳಲ್ಲಿ ಮೀನು ಹಿಡಿಯಲು ಪರವಾನಗಿಗಳನ್ನು ವಿತರಿಸುವಾಗ ಮೀನುಗಾರಿಕೆ ಅಧಿಕಾರಿಗಳು ಕಡ್ಡಾಯವಾಗಿ ಪಾಲಿಸಬೇಕಾದ ವಿಧಿವಿಧಾನಗಳು ಮತ್ತು ಮಾರ್ಗಸೂಚಿಗಳು.

1. ರಾಜ್ಯದ ಆಯ್ದ ನದಿ ಭಾಗಗಳು (ಗುತ್ತಿಗೆಗೆ ಕೋರದ) ಮತ್ತು ಈ ಆದೇಶದ ಅನುಬಂಧ-3ರಲ್ಲಿ ತಿಳಿಸಿರುವ ಜಲಾಶಯಗಳಲ್ಲಿ ಮೀನುಗಾರಿಕೆಯನ್ನು ಪರವಾನಗಿ ಮೂಲಕ ನಡೆಸುವುದು.

2. ಪರವಾನಗಿಗಳನ್ನು ಕೋರುವ ಅರ್ಜಿದಾರರು ಈ ಆದೇಶದ ಅನುಬಂಧ-16ರಲ್ಲಿ ತಿಳಿಸಿರುವ ನಿಗಧಿತ ಅರ್ಜಿಯೊಡನೆ ಸಂಬಂಧಪಟ್ಟ ಮೀನುಗಾರಿಕೆ ಸಹಾಯಕ ನಿರ್ದೇಶಕರುಗಳಿಗೆ ಅರ್ಜಿ ಸಲ್ಲಿಸಿ ಪರವಾನಗಿ ಪಡೆಯುವುದು.

3. ಪರವಾನಗಿಗಳನ್ನು ವಿತರಿಸುವ ಕಾರ್ಯಕ್ರಮ "ಸಕಾಲ" ಯೋಜನೆಯಡಿ ಬರುವುದರಿಂದ ನಿಗಧಿತ ಅವಧಿಯೊಳಗೆ ಪರವಾನಗಿಗಳನ್ನು ನಿಗದಿ ನಮೂನೆ ಈ ಆದೇಶದ ಅನುಬಂಧ-17ರಂತೆ ವಿತರಿಸುವುದು.

4. ಪರವಾನಗಿ ಅವಧಿಯು "ಮೀನುಗಾರಿಕೆ ವರ್ಷಕ್ಕೆ" ಮಾತ್ರ ಸೀಮಿತವಾಗಿರುತ್ತದೆ. ಮೀನುಗಾರಿಕೆ ವರ್ಷದ ಯಾವುದೇ ಸಮಯದಲ್ಲಿ ಪರವಾನಗಿ ನೀಡಿದರೂ ಸಹ ಮೀನುಗಾರಿಕೆ ವರ್ಷದ ಅಂತ್ಯಕ್ಕೆ ಅಂದರೆ ಜೂನ್ 30ಕ್ಕೆ ಪರವಾನಗಿ ಕೊನೆಗೊಳ್ಳುತ್ತದೆ.

5. ಪರವಾನಗಿಗಳನ್ನು ಒಬ್ಬರಿಂದ ಒಬ್ಬರಿಗೆ ವರ್ಗಾಯಿಸುವಂತಿಲ್ಲ.

6. ಪರವಾನಗಿದಾರರು ಮೀನುಗಾರಿಕೆ ನಿಷೇಧದ ಅವಧಿಯಲ್ಲಿ ಮೀನು ಹಿಡಿಯುವುದನ್ನು ಪೂರ್ಣವಾಗಿ ನಿಷೇಧಿಸಲಾಗಿದೆ. ಮತ್ತು ಈ ಅವಧಿಯಲ್ಲಿ ಕ್ರೀಡಾ ಮೀನುಗಾರರಿಗೆ ಪರವಾನಗಿಗಳನ್ನು ವಿತರಿಸಕೂಡದು.

7. ನದಿ ಮತ್ತು ಜಲಾಶಯಗಳಲ್ಲಿ ಮೀನು ಹಿಡಿಯುವ ಎಲ್ಲಾ ಸಮಯದಲ್ಲಿ ಪರವಾನಗಿದಾರರು ಪರವಾನಗಿಯ ಪ್ರತಿ ಮತ್ತು ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹೊಂದಿರಬೇಕು.

8. ಪರವಾನಗಿ ಪಡೆದ ಮೀನುಗಾರರು ಪರವಾನಗಿಯಲ್ಲಿ ತಿಳಿಸಿರುವ ವಿಧಾನದಲ್ಲಿ ಮಾತ್ರ ಮೀನು ಶಿಕಾರಿ ಮಾಡುವುದು. ಡೈನಾಮೈಟ್, ವಿಷಕಾರಕ ಅಥವಾ ರಾಸಾಯನಿಕ ವಸ್ತುಗಳನ್ನು ಉಪಯೋಗಿಸಿ ಮೀನುಗಾರಿಕೆ ಮಾಡಿದ್ದಲ್ಲಿ ಪರವಾನಗಿಯನ್ನು ತಕ್ಷಣದಿಂದ ರದ್ದು ಮಾಡುವುದು.

9. ಪರವಾನಗಿ ಹೊಂದಿದ ಮೀನುಗಾರರು ಪರವಾನಗಿಯಲ್ಲಿ ನಿಗಧಿಪಡಿಸಿದ ಪ್ರದೇಶದಲ್ಲಿ ಮಾತ್ರ ಮೀನುಗಾರಿಕೆಯನ್ನು ಮಾಡಲು ಹಕ್ಕುಳ್ಳವರಾಗಿರುತ್ತಾರೆ.

10. ಪರವಾನಗಿಯಲ್ಲಿ ನಿಗಧಿಪಡಿಸಿರುವ ನಿಗಧಿತ ಕಣ್ಣಿನ ಅಳತೆಯ ಬಲೆಗಳನ್ನು ಮಾತ್ರ ಉಪಯೋಗಿಸಿ ಮೀನು ಹಿಡಿಯುವುದು.

11. ನದಿ ಮತ್ತು ಜಲಾಶಯದಲ್ಲಿ ಎಳೆ ಬಲೆಗಳು, ಮಾರಿ ಬಲೆಗಳು ಮತ್ತು ಇನ್ನಿತರೆ ಪ್ರಕಾರದ ಎಳೆ ಬಲೆಗಳನ್ನು ಉಪಯೋಗಿಸಿ ಮೀನು ಹಿಡಿಯುವುದನ್ನು ನಿಷೇಧಿಸಲಾಗಿದೆ.

12. ಪರವಾನಗಿದಾರರು ಮೀನು ಹಿಡಿಯವ ಸಮಯದಲ್ಲಿ ಜೀವ ರಕ್ಷಕ ಸಾಧನವಾದ ಲೈಫ್ ಜಾಕೆಟ್‌ನ್ನು ಧರಿಸುವುದು ಕಡ್ಡಾಯ ಮತ್ತು ಜೀವ ರಕ್ಷಣೆಗೆ ಎಲ್ಲಾ ಮುಂಜಾಗರೂಕತೆ ಕ್ರಮಗಳನ್ನು ಕೈಗೊಳ್ಳುವುದು.

13. ಜಲಾಶಯದ ಮತ್ತು ನದಿಗಳಿಗೆ ಪರವಾನಗಿ ನೀಡುವಾಗ ಸ್ಥಳೀಯ ಮೀನುಗಾರರಿಗೆ ಆದ್ಯತೆ ನೀಡುವುದು. ಸ್ಥಳೀಯ ಮೀನುಗಾರರು ಎಂದರೆ ಕನಿಷ್ಠ 5 ವರ್ಷ ಸ್ಥಳೀಯ ವಾಸದ ದೃಢೀಕರಣ ಪತ್ರ ಹೊಂದಿರುವಂತವರು ಹಾಗೂ ಜಲಸಂಪನ್ಮೂಲದ ದಡದಿಂದ ಗರಿಷ್ಠ 5 ಕಿ.ಮೀ. ಆಸುಪಾಸಿನಲ್ಲಿ ವಾಸಿಸುತ್ತಿರುವವರು.

14. ಜಲಾಶಯದಲ್ಲಿ ಹಿಡಿದ ಮೀನನ್ನು ಪರವಾನಗಿದಾರರು ಇಲಾಖೆಯು ನಿಗಧಿಪಡಿಸಿದ ನಿರ್ದಿಷ್ಟ ಪ್ರದೇಶದಲ್ಲಿ ಒಟ್ಟು ಮಾಡಿ ಸ್ಥಳೀಯ ಗ್ರಾಹಕರಿಗೆ ಮಾರಾಟ ಮಾಡಿ, ಉಳಿದ ಮೀನನ್ನು ಬೇರೆಡೆಗೆ ಮುಂರಾಟಕ್ಕೆ ಸಾಗಿಸಬಹುದು.

15. ನದಿ ಮತ್ತು ಜಲಾಶಯದಲ್ಲಿ ವಿತರಿಸಬೇಕಾದ ಗರಿಷ್ಠ ಪ್ರಮಾಣದ ಪರವಾನಗಿಗಳ ಸಂಖ್ಯೆಯನ್ನು ಮಿನುಗಾರಿಕೆ ನಿರ್ದೇಶಕರು ಪ್ರತ್ಯೇಕವಾಗಿ ಪ್ರಕಟಣೆ ಹೊರಡಿಸುವುದು.

16. ಪರವಾನಗಿದಾರರು ಮೀನು ಹಿಡಿಯವಾಗ ಜಲಾಶಯದ ಮತ್ತು ನದಿಯ ಭದ್ರತೆ ಮತ್ತು ನೀರಿನ ಸ್ವಚ್ಚತೆ (ಮಾಲಿನ್ಯಕರಣಗೊಳ್ಳದಂತೆ) ನೋಡಿಕೊಳ್ಳತಕ್ಕದ್ದು. ಪರವಾನಗಿಗೆ ಸಂಬಂಧಪಟ್ಟಂತೆ ಜಲಾಶಯದ ಪ್ರಾಧಿಕಾರ ಅಥವಾ ಇಲಾಖೆಯು ವಿಧಿಸುವ ಹೆಚ್ಚುವರಿ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಬಾರದು.

17. ಪರವಾನಗಿದಾರರು ನದಿ ಮತ್ತು ಜಲಾಶಯದಲ್ಲಿ ಹಿಡಿದ ಮೀನಿನ ಅಂಕಿ ಅಂಶಗಳನ್ನು ಪ್ರತಿ ತಿಂಗಳು ಸಂಬಂಧಪಟ್ಟ ತಾಲ್ಲೂಕು ಮೀನುಗಾರಿಕೆ ಅಧಿಕಾರಿಗೆ ಒದಗಿಸತಕ್ಕದ್ದು.

18. ಪ್ರಕೃತಿ ವಿಕೋಪದಿಂದ ಪರವಾನಗಿದಾರರಿಗೆ ನಷ್ಟ ಅಥವಾ ಸಲಕರಣೆಗಳಿಗೆ ಹಾನಿ ಉಂಟಾದಲ್ಲಿ ಅಥವಾ ನಷ್ಟ ಉಂಟಾದಲ್ಲಿ ಅಂತಹ ನಷ್ಟಗಳಿಗೆ ಇಲಾಖೆಯು ಜವಾಬ್ದಾರರಾಗುವುದಿಲ್ಲ.

19. ಸಂಶೋಧನೆಗಾಗಿ ಮೀನುಗಳಿಗೆ ಟ್ಯಾಗ್ ಮಾಡಿದ ಮೀನುಗಳು ಬಲೆಯಲ್ಲಿ ಸಿಕ್ಕಿದ್ದಲ್ಲಿ ಅಂತಹ ಮೀನುಗಳನ್ನು ಮತ್ತೆ ನೀರಿಗೆ ವಾಪಸ್ಸು ಬಿಡುವುದು ಅಥವಾ ಅಂತಹ ಮೀನುಗಳನ್ನು ತಾಲ್ಲೂಕು ಮೀನುಗಾರಿಕೆ ಅಧಿಕಾರಿಗೆ ಒಪ್ಪಿಸತಕ್ಕದ್ದು.

20. ಮೀನುಗಳ ಸಂರಕ್ಷಣೆಗಾಗಿ "ಮತ್ಸ್ಯಧಾಮ" ಗಳೆಂದು ಗುರುತಿಸಿದ ಸ್ಥಳಗಳಲ್ಲಿ ಕಡ್ಡಾಯವಾಗಿ ಮೀನುಗಾರಿಕೆಯನ್ನು ಪೂರ್ಣವಾಗಿ ನಿಷೇಧಿಸಿದೆ. ಮತ್ಸ್ಯಧಾಮಗಳಲ್ಲಿ ಪರವಾನಗಿದಾರರು ಮೀನುಗಾರಿಕೆ ಮಾಡಿದ್ದಲ್ಲಿ ಅಂತಹ ಪರವಾನಗಿಯನ್ನು ತಕ್ಷಣದಿಂದ ರದ್ದುಗೊಳಿಸುವುದು ಹಾಗೂ ಅವರ ಹೆಸರನ್ನು ಕಪ್ಪುಪಟ್ಟಿಗೆ ಸೇರಿಸಿ ಮುಂದಿನ ಸಾಲುಗಳಿಗೆ ಪರವಾನಗಿಯನ್ನು ನಿರಾಕರಿಸುವುದು.

21. ಪರವಾನಗಿಯನ್ನು ವಿತರಿಸಿದ ಅಧಿಕಾರಿಯು ಪರವಾನಗಿಯನ್ನು ರದ್ದುಗೊಳಿಸುವ ಅಧಿಕಾರ ಹೊಂದಿರುತ್ತಾರೆ.

ಮೇಲಿನ ಯಾವುದೇ ನಿಯಮಗಳನ್ನು ಉಲ್ಲಂಘಿಸಿದಲ್ಲಿ ಪರವಾನಗಿಯನ್ನು ಗಣ್ಯಗಣಿಸುವ ಅಥವಾ ಮಾರ್ಪಾಡು ಮಾಡುವ ಅಧಿಕಾರ ಮೀನುಗಾರಿಕೆ ಇಲಾಖೆಗೆ ಇರುತ್ತದೆ.

ಜಿ.ಜಯಣ್ಣ

ಸರ್ಕಾರದ ಅಧೀನ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ

ಅನುಬಂಧ-7

ವಿಲೇವಾರಿಯಾಗದ ಒಳನಾಡು ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕಿನ ವಿಲೇವಾರಿ ವಿನಾಯಿತಿ ಪಡೆಯಲು ಸಲ್ಲಿಸಬೇಕಾದ ಚೆಕ್‌ಲಿಸ್ಟ್ (ಪ್ರತಿ ಕೆರೆಗೆ ಪ್ರತ್ಯೇಕವಾದ ಚೆಕ್‌ಲಿಸ್ಟ್ ಸಲ್ಲಿಸುವುದು)

| | | | | | | |
|---|---|---|---|---|---|---|
| 1 | ಜಲಸಂಪನ್ಮೂಲದ ಹೆಸರು ಮತ್ತು ಪೂರ್ಣ ವಿಳಾಸ | | | | | |
| 2 | ಅ) ಅಚ್ಚುಕಟ್ಟು ಪ್ರದೇಶ ( ಹೆ) | | | | | |
| | ಆ) ಜಲ ವಿಸ್ತೀರ್ಣ(ಹೆ) | | | | | |
| 3 | ಕಳೆದ 3 ವರ್ಷಗಳ ವಿಲೇವಾರಿ ವಿಧಾನ ಮತ್ತು ವರ್ಷವಾರು ಆದಾಯದ ವಿವರಗಳು | ವರ್ಷ | ವಿಧಾನ (ಗುತ್ತಿಗೆ /ಹರಾಜು) ವಿನಾಯಿತಿ | ಗುತ್ತಿಗೆದಾರರ ಹೆಸರು/ ವಿಳಾಸ | ಗುತ್ತಿಗೆ/ ಹರಾಜು ಮೊತ್ತ (ರೂ.ಗಳಲ್ಲಿ) | ಷರಾ |
| | | | | | | |
| | | | | | | |
| | | | | | | |
| | | | | | | |
| 4 | ಮೇಲಿನ ಅವಧಿಯಲ್ಲಿ ವಿಲೇ ವಿನಾಯಿತಿ ಪಡೆದಿದ್ದಲ್ಲಿ ಪ್ರತಿ ಲಗತ್ತಿಸಲಾಗಿದೆಯೇ? | | | | | |
| 5 | ಕೆರೆಯ ಸ್ಥಳ ಪರಿಶೀಲನಾ ವರದಿ (ಮಹಜರ್) ಲಗತ್ತಿಸಲಾಗಿದೆಯೇ? | | | | | |
| 6 | ಕೆರೆಯ ಛಾಯಾಚಿತ್ರ ಲಗತ್ತಿಸಲಾಗಿದೆಯೇ? | | | | | |
| 7 | ಗುತ್ತಿಗೆ/ಟೆಂಡರ್-ಕಂ-ಹರಾಜು/ಇಶ್ತಿಹಾರ್ ಪ್ರಕಟಣೆಯ ಪ್ರತಿ ಲಗತ್ತಿಸಲಾಗಿದೆಯೇ? | | | | | |
| 8 | ಹರಾಜು ಪಟ್ಟಿ (ಯಾರು ಹರಾಜಿನಲ್ಲಿ ಭಾಗವಹಿಸದಿರುವ ಬಗ್ಗೆ ದೃಢೀಕರಣ ದೊಂದಿಗೆ) ಲಗತ್ತಿಸಲಾಗಿದೆಯೇ? | | | | | |
| 9 | ತಾಲ್ಲೂಕು ಮಟ್ಟದ ಅಧಿಕಾರಿಯ ಶಿಫಾರಸ್ಸು | | | | | |

ಮೀನುಗಾರಿಕೆ ಸಹಾಯಕ ನಿರ್ದೇಶಕರು(ಶ್ರೇಣಿ-2)

ತಾಲ್ಲೂಕು-------------------------------

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ

ಅನುಬಂಧ-8

ಕರ್ನಾಟಕ ಸರ್ಕಾರ

(ಮೀನುಗಾರಿಕೆ ಇಲಾಖೆ)

ಸಂ.

ಮೀನುಗಾರಿಕೆ ಸಹಾಯಕ ನಿರ್ದೇಶಕರು

(ಶ್ರೇಣಿ-2)ರವರ ಕಛೇರಿ,

ತಾಲ್ಲೂಕು, ಜಿಲ್ಲೆ,

ದಿನಾಂಕ

ಸರ್ಕಾರಿ ಸ್ವಾಮ್ಯದ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆ ಮುಖಾಂತರ ವಿಲೇವಾರಿ ಮಾಡುವ ಬಗ್ಗೆ ಪ್ರಕಟಣೆ

ಜಿಲ್ಲೆಯ ತಾಲ್ಲೂಕಿನ ಈ ಕೆಳಕಂಡ ಜಲ ಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ನೇ ಮೀನುಗಾರಿಕೆ ಫಸಲಿ ವರ್ಷದಿಂದ ನೇ ಮೀನುಗಾರಿಕೆ ಫಸಲಿ ವರ್ಷದವರೆಗೆ (ಅಂದರೆ ದಿನಾಂಕ 01/07/ ರಿಂದ 30/06/ ರವರೆಗೆ) ಗರಿಷ್ಠ ಐದು (05) ವರ್ಷಗಳ ಅವಧಿಗೆ ಸರ್ಕಾರದ ನಿಯಮಗಳ ಮೇರೆಗೆ ಅರ್ಹ ಮೀನುಗಾರರ ಸಹಕಾರ ಸಂಘಕ್ಕೆ ಗುತ್ತಿಗೆ ನೀಡಲಾಗುವುದು.

ವಿಲೇವಾರಿ ಮಾಡಲು ಪ್ರಸ್ತಾಪಿಸಿರುವ ಸರ್ಕಾರಿ ಜಲಸಂಪನ್ಮೂಲಗಳ (ಕೆರೆ ಜಲಾಶಯದ) ವಿವರಗಳು

| ಕ್ರ.ಸಂ. | ಜಲ ಸಂಪನ್ಮೂಲದ ಹೆಸರು | ಗ್ರಾಮ / ಹೋಬಳಿ | ಜಲವಿಸ್ತೀರ್ಣ/ಅಚ್ಚುಕಟ್ಟು ಪ್ರದೇಶ (ಹೆಕ್ಟೇರುಗಳಲ್ಲಿ) | ಗುತ್ತಿಗೆ ಮೊತ್ತ (ರೂ.ಗಳಲ್ಲಿ) | ಭದ್ರತಾ ಠೇವಣಿ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 2 | 3 | 4 | 5 | 6 |
| | | | | | |
| | | | | | |

ಮೇಲ್ಕಂಡ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು (ಅನುಬಂಧ-10) ಪಡೆಯಲಿಚ್ಛಿಸುವ ಅರ್ಹ ಮೀನುಗಾರರ ಸಹಕಾರ ಸಂಘ ಮಾತ್ರ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ದಿನಾಂಕ 20/05/----ರೊಳಗಾಗಿ ಕಛೇರಿ ವೇಳೆಯಲ್ಲಿ ಈ ಕಛೇರಿಗೆ ಸಲ್ಲಿಸತಕ್ಕದ್ದು. ನಿಗದಿತ ಅವಧಿಯ ನಂತರ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಗುತ್ತಿಗೆ ಪಡೆಯಲು ಸಲ್ಲಿಸಬೇಕಾದ ಅರ್ಜಿ (ಅನುಬಂಧ-9) ಷರತ್ತು ಮತ್ತು ನಿಬಂಧನೆಗಳು (ಅನುಬಂಧ-11) ಮತ್ತು ಗುತ್ತಿಗೆದಾರರು ಬರೆದುಕೊಡಬೇಕಾದ ಗುತ್ತಿಗೆ ಕರಾರಿನ ಮುಚ್ಚಳಿಕೆ ಪತ್ರದ (ಅನುಬಂಧ-10)ರ ಪ್ರತಿಗಳನ್ನು ಕಛೇರಿಯ ವೇಳೆಯಲ್ಲಿ ಪಡೆಯಬಹುದು.

ಸಹಿ/-

ಮೀನುಗಾರಿಕೆ ಸಹಾಯಕ ನಿರ್ದೇಶಕರು(ಶ್ರೇಣಿ-2).

-------------------ತಾಲ್ಲೂಕು

**ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ**

**ಅನುಬಂಧ-9**

**(ಮೀನುಗಾರಿಕೆ ಇಲಾಖೆ)**

**ಮೀನುಗಾರಿಕೆ ಇಲಾಖೆಯ ಪ್ರಕಟಣೆ ಸಂಖ್ಯೆ** .......................................................... ದಿನಾಂಕ ........................... ರಂತೆ ....................................

**ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಪಡೆಯಲು ಅರ್ಜಿ**

**ಮೀನುಗಾರರ ಸಹಕಾರ ಸಂಘಗಳಿಂದ ನೀಡಬೇಕಾದ ಮಾಹಿತಿ**

| | | |
|---|---|---|
| 1 | ಮೀನುಗಾರರ ಸಂಘದ ಹೆಸರು ಮತ್ತು ಪೂರ್ಣ ವಿಳಾಸ | |
| 2 | ಮೀನುಗಾರರ ಸಹಕಾರ ಸಂಘದ ನೋಂದಣಿ ಸಂಖ್ಯೆ ಮತ್ತು ದಿನಾಂಕ (ನೋಂದಣಿ ಪ್ರಮಾಣ ಪತ್ರದ ಜೆರಾಕ್ಸ್ ಪ್ರತಿಯನ್ನು ಲಗತ್ತಿಸುವುದು) | |
| 3 | ಮೀನುಗಾರರ ಸಹಕಾರ ಸಂಘದ ಅಧಿಕೃತ ಬೈಲಾ ಪ್ರತಿ (ಲಗತ್ತಿಸುವುದು) | |
| 4 | ಸಂಘದ ಕಾರ್ಯಕ್ಷೇತ್ರ | |
| 5 | ಸಂಘದ ಆಡಳಿತ ಮಂಡಳಿಯ ಸದಸ್ಯರ ಪಟ್ಟಿ ಲಗತ್ತಿಸಲಾಗಿದೆಯೇ? (ಅರ್ಜಿ ಸಲ್ಲಿಸುವ ದಿನಾಂಕ ದಂದಿನಂತೆ ಆಡಳಿತ ಮಂಡಳಿಯ ಸದಸ್ಯರ ಹೆಸರು, ಪೂರ್ಣ ವಿಳಾಸ, ವಯಸ್ಸು, ವೃತ್ತಿ, ಇತ್ಯಾದಿ ವಿವರಗಳನ್ನೊಳಗೊಂಡ ಪಟ್ಟಿಯನ್ನು ಲಗತ್ತಿಸುವುದು) | |
| 6 | ಸಂಘ ಈ ಹಿಂದೆ ಗುತ್ತಿಗೆಗೆ ಪಡೆದಿದ್ದ ಜಲ ಸಂಪನ್ಮೂಲಗಳ ವಿವರ ನೀಡುವುದು (ಅವುಗಳ ಪೈಕಿ ಪ್ರಸಕ್ತ ವರ್ಷದಲ್ಲಿ ಚಾಲ್ತಿಯಲ್ಲಿರುವ ಜಲಸಂಪನ್ಮೂಲಗಳ ಜಲವಿಸ್ತೀರ್ಣ, ಅಚ್ಚುಕಟ್ಟು ಪ್ರದೇಶ, ನೀಡತಕ್ಕದ್ದು). | |
| 7 | ಸಂಘದ ಕಳೆದ 5 ವರ್ಷಗಳ ಅವಧಿಯ ಯಾವುದಾದರೂ 3 ವರ್ಷಗಳ ಸಹಕಾರ ಇಲಾಖೆಯ ಲೆಕ್ಕ ಪರಿಶೋಧನಾ ವರದಿಯನ್ನು ಲಗತ್ತಿಸುವುದು. | |
| 8 | ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ವಿವರ ನೀಡುವುದು (ಸಾಲ ಮತ್ತು ಷೇರು ಬಂಡವಾಳದ ವಿವರಗಳು) | |
| 9 | ಸಂಘವು ಜಲಸಂಪನ್ಮೂಲದ ಗುತ್ತಿಗೆಗೆ ಕೋರಿರುವ ಆಡಳಿತ ಮಂಡಳಿಯ ನಡವಳಿಗಳ (ಠರಾವು) ದೃಢೀಕೃತ ಪ್ರತಿಯನ್ನು ಲಗತ್ತಿಸುವುದು | |
| 10 | ಜಲಸಂಪನ್ಮೂಲದ ಗುತ್ತಿಗೆ ಮೊತ್ತವನ್ನು ಮತ್ತು ಭದ್ರತಾ ಠೇವಣಿ ಮೊತ್ತವನ್ನು ಮುಂಗಡವಾಗಿ ಡಿ.ಡಿ. ಮುಖಾಂತರ ಪಾವತಿಸುವುದು. (ಡಿ.ಡಿ. ಸಂಖ್ಯೆ, ದಿನಾಂಕದ ವಿವರ ನೀಡುವುದು. | |
| 11 | ಸಂಘವು ಕೆರೆಗಳನ್ನು ಹಿಂದೆ ಗುತ್ತಿಗೆ ಪಡೆದಿದ್ದಲ್ಲಿ ಹಿಂದಿನ ಮೂರು ವರ್ಷಗಳ ಲಾಭ ಹಾಗೂ ನಷ್ಟದ ತಃಖ್ತೆ ಲಗತ್ತಿಸುವುದು. | |
| 12 | ಸಂಘದ ಬ್ಯಾಂಕ್ ಖಾತೆಯ ಪಾಸ್‌ಬುಕ್‌ನ ದೃಢೀಕೃತ ಪ್ರತಿ ಲಗತ್ತಿಸುವುದು. (ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದವರೆಗಿನ ಬ್ಯಾಂಕ್ ವಹಿವಾಟಿನ ವಿವರ ಸೇರಿದಂತೆ) | |

ಮೇಲ್ಕಾಣಿಸಿದ ಜಲಸಂಪನ್ಮೂಲವನ್ನು ಗುತ್ತಿಗೆಗೆ ಪಡೆದಲ್ಲಿ ಸರ್ಕಾರದ / ಮೀನುಗಾರಿಕೆ ಇಲಾಖೆಯ ಎಲ್ಲಾ ಷರತ್ತು ಮತ್ತು ನಿಬಂಧನೆಗಳಿಗೆ ಬದ್ಧರಾಗಿರುತ್ತೇವೆಂದು / ನೆಂದು ಹಾಗೂ ಕಾಲಕಾಲಕ್ಕೆ ವಿಧಿಸಬಹುದಾದ ಹೆಚ್ಚುವರಿ ಷರತ್ತು ಮತ್ತು ನಿಬಂಧನೆಗಳಿಗೂ ಬದ್ಧರಾಗಿರುತ್ತೇವೆಂದು/ನೆಂದು ಮತ್ತು ನಿಗದಿತ ಮೌಲ್ಯದ ಛಾಪಾ ಕಾಗದದಲ್ಲಿ ಈ ಬಗ್ಗೆ ಮುಚ್ಚಳಿಕೆ ಪತ್ರವನ್ನು ಬರೆದುಕೊಡುತ್ತೇವೆಂದು/ನೆಂದು ತಿಳಿಸಬಯಸುತ್ತೇವೆ/ತ್ತೇನೆ.

ಸ್ಥಳ :

ದಿನಾಂಕ :

---------------------

ಮೀನುಗಾರರ ಸಹಕಾರ ಸಂಘದ ಅಧ್ಯಕ್ಷರು/

ಕಾರ್ಯದರ್ಶಿಯ ಸಹಿ

---------------------

ಹೆಸರು

ವಿಳಾಸ

ಮೊಹರು:-

---------------------

---------------------

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ

ಅನುಬಂಧ-10

(ಮೀನುಗಾರಿಕೆ ಇಲಾಖೆ)

ಸರ್ಕಾರಿ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಪಡೆದ ಗುತ್ತಿಗೆದಾರರು ಛಾಪಾ ಕಾಗದದಲ್ಲಿ (ರೂ.200.00) ಬರೆದು ಕೊಡಬೇಕಾದ ಮುಚ್ಚಳಿಕೆಯ ಪತ್ರ (ನೋಟರೀಕರಿಸುವುದು)

ಸನ್ ಎರಡು ಸಾವಿರದ ......................................ನೇ ಇಸವಿ ........................ ಮಾಹೆಯ ....................... ದಿನಾಂಕದಂದು ........................................................... ಗ್ರಾಮಕ್ಕೆ ಸೇರಿದ ........................................ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕಿನ ಗುತ್ತಿಗೆಯನ್ನು ಪಡೆದು ಈ ದಿನ ಅಂದರೆ, ದಿನಾಂಕ ................................ ರಂದು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), .......................................... ತಾಲ್ಲೂಕುರವರಿಗೆ................................................................ ಎಂಬ ನಾನು / ..........................................................ಮೀನುಗಾರರ ಸಹಕಾರ ಸಂಘ .................................................... ಎಂಬುವರು ಖುದ್ದಾಗಿ ಬರೆದುಕೊಟ್ಟ ಮುಚ್ಚಳಿಕೆ ಪತ್ರ.

ಈ ಮೇಲ್ಕಂಡ .................................... ಗ್ರಾಮದ ............................................ ಜಲಸಂಪನ್ಮೂಲದಲ್ಲಿ ಮೀನು ಹಿಡಿಯುವ ಪಾಶುವಾರು ಹಕ್ಕನ್ನು ದಿನಾಂಕ ............................ ರಿಂದ ................................ ದಿನಾಂಕದವರೆಗೆ ನಾನು / ನಾವು ಗುತ್ತಿಗೆ ಮೂಲಕ ತೆಗೆದುಕೊಂಡಿದ್ದೇನೆ / ದ್ದೇವೆ. ಸದರಿ ಗುತ್ತಿಗೆಯ ಪ್ರಥಮ ವರ್ಷದ ಗುತ್ತಿಗೆ ಹಣದ ಬಾಬ್ತು ರೂ. /- ಗಳನ್ನು ಮತ್ತು ಇದಕ್ಕೆ ಸಂಬಂಧಪಟ್ಟ ಭದ್ರತಾ ಠೇವಣಿ ಮೊತ್ತ ರೂ. ..................ಗಳನ್ನು ಅಂದರೆ ಈ ರೀತಿಯಾಗಿ ಒಟ್ಟು ರೂ...........................................ಗಳನ್ನು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ........................ ರವರ ಕಛೇರಿಯಲ್ಲಿ ................................. ಬ್ಯಾಂಕಿನ ನಗದುಹುಂಡಿ (ಡಿ.ಡಿ.) ಸಂ. ................................ ದಿನಾಂಕ ....................................ರ ಮುಖಾಂತರ ಪಾವತಿ ಮಾಡಿ ರಸೀದಿಯನ್ನು ಪಡೆದಿರುತ್ತೇವೆ.

ಗುತ್ತಿಗೆಗೆ ಪಡೆಯಲಾದ ............................ ಜಲಸಂಪನ್ಮೂಲದಲ್ಲಿ ಮೀನು ಕೃಷಿ ಕೈಗೊಳ್ಳುವ ಪೂರ್ಣ ಗುತ್ತಿಗೆ ಅವಧಿಯಲ್ಲಿ ಈ ಸಂಬಂಧಿತವಾಗಿ ಸರ್ಕಾರದಿಂದ/ಮೀನುಗಾರಿಕೆ ಇಲಾಖೆಯಿಂದ ಈಗಾಗಲೇ ಸರ್ಕಾರದ ಆದೇಶ ಸಂಖ್ಯೆ ---------------- ದಿನಾಂಕ--------------ರ <u>ಅನುಬಂಧ-11ರಲ್ಲಿ(ಲಗತ್ತಿಸಿದೆ)</u> ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳು / ಇನ್ನು ಮುಂದೆ ವಿಧಿಸಬಹುದಾದ ಎಲ್ಲಾ ಷರತ್ತು ಮತ್ತು ನಿಬಂಧನೆಗಳನ್ನು ಕಡ್ಡಾಯವಾಗಿ ಪಾಲಿಸಲು ನಾನು/ನಮ್ಮ ಸಂಘವು ಬದ್ಧವಾಗಿರುತ್ತೇವೆ. ಸದರಿ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ನಮ್ಮ ಸಂಘಕ್ಕೆ ನೀಡಿದ ಮೀನು ಪಾಶುವಾರು ಹಕ್ಕಿನ ಗುತ್ತಿಗೆ ಆದೇಶವನ್ನು ತಕ್ಷಣ ರದ್ದುಪಡಿಸಲು ನಮ್ಮ ಅಭ್ಯಂತರವಿರುವುದಿಲ್ಲ.

ಈ ಗುತ್ತಿಗೆ ಅವಧಿಯ ನಂತರ ಸದರಿ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕು ನಮ್ಮ ಸಂಘಕ್ಕೆ ಇರುವುದಿಲ್ಲವೆಂದು ನಮಗೆ ಮನವರಿಕೆಯಾಗಿದೆ.

---------------

ಗುತ್ತಿಗೆದಾರರ ಸಹಿ

---------------

ಹೆಸರು ಮತ್ತು ಪದನಾಮ

---------------

ವಿಳಾಸ

ಸ್ಥಳ:-

ದಿನಾಂಕ :-

ಮೊಹರು.

ಸಾಕ್ಷಿಗಳು:-

1) ಹೆಸರು, ಸಹಿ ಮತ್ತು ವಿಳಾಸ

2) ಹೆಸರು, ಸಹಿ ಮತ್ತು ವಿಳಾಸ

ಆದೇಶ ಸಂಖ್ಯೆ:ಪಸಂಮೀ 125 ಮೀಇಫ 2013, ಬೆಂಗಳೂರು ದಿನಾಂಕ:21-02-2014ರ

ಅನುಬಂಧ-11

ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಪಡೆದ ಗುತ್ತಿಗೆದಾರರು ಕಡ್ಡಾಯವಾಗಿ ಪಾಲಿಸಬೇಕಾದ ಷರತ್ತು ಮತ್ತು ನಿಬಂಧನೆಗಳು

1) ಸರ್ಕಾರಿ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ಗುತ್ತಿಗೆಯನ್ನು ಪಡೆಯಲು ಬಯಸುವ ಅರ್ಜಿ ಮೀನುಗಾರಿಕೆ ಸಹಕಾರಿ ಸಂಘಗಳು ಈ ಆದೇಶದ ಅನುಬಂಧ-1ರಲ್ಲಿನ ಅರ್ಹತೆಗಳನ್ನು ಹೊಂದಿರಬೇಕು. ಗುತ್ತಿಗೆಯನ್ನು ಪಡೆಯಲು ಬಯಸುವ ಮೀನುಗಾರರ ಸಹಕಾರ ಸಂಘಗಳು ಆಡಳಿತ ಮಂಡಳಿಯ ನೋಟರೀಕರಿಸಿದ ಠರಾವು, ಕಳೆದ ಐದು ವರ್ಷಗಳ ಅವಧಿಯಲ್ಲಿ ಯಾವುದಾದರೂ ಮೂರು ವರ್ಷಗಳ ಸಹಕಾರ ಇಲಾಖೆ ನಡೆಸಿದ ಲೆಕ್ಕ ಪರಿಶೋಧನಾ ವರದಿ, ಬೈಲಾ ಪ್ರತಿ, ಈಗಾಗಲೇ ಮೀನುಗಾರಿಕೆ ಚಟುವಟಿಕೆಯನ್ನು ಕೈಗೊಂಡಿದ್ದಲ್ಲಿ ಕಳೆದ ಮೂರು ವರ್ಷಗಳ ಕೆರೆವಾರು ಮೀನುಮರಿಗಳ ಬಿತ್ತನೆ ವಿವರಗಳು, ಹಿಡುವಳಿ ವಿವರಗಳು ಮತ್ತು ಅದರಿಂದ ಬಂದ ಆದಾಯ ಇತ್ಯಾದಿ ವಿವರಗಳನ್ನೊಳಗೊಂಡ ಮಾಹಿತಿಯನ್ನು ಸಂಬಂಧಪಟ್ಟ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2)ರವರಿಗೆ ಈ ಆದೇಶದ ಅನುಬಂಧ-9ರಲ್ಲಿ ನಿಗದಿಪಡಿಸಿದ ಅರ್ಜಿಯೊಂದಿಗೆ ಅಂತಿಮ ದಿನಾಂಕ ದೊಳಗೆ ತಪ್ಪದೇ ನೀಡತಕ್ಕದ್ದು. ಅಪೂರ್ಣ ಮಾಹಿತಿಯುಳ್ಳ ಅರ್ಜಿ ಮತ್ತು ಅವಶ್ಯಕವಿರುವ ಈ ಕೆಳಕಂಡ ದಾಖಲಾತಿಗಳನ್ನು ಸಲ್ಲಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಅ) ಕರ್ನಾಟಕ ಸಹಕಾರಿ ಕಾಯ್ದೆಯನ್ವಯ ನಿಯಮಾನುಸಾರ ಆಡಳಿತ ಮಂಡಳಿಯ ಸಭೆಗಳನ್ನು ಮತ್ತು ಚುನಾವಣೆಯನ್ನು ನಡೆಸಿರಬೇಕು ಹಾಗೂ ಆಡಳಿತ ಮಂಡಳಿ ರಚನೆಯಾಗಿರುವ ಬಗ್ಗೆ ದಾಖಲಾತಿಗಳು.

ಆ) ಸಂಘವು ಕಳೆದ 5 ವರ್ಷಗಳ ಅವಧಿಯಲ್ಲಿ ಯಾವುದಾದರೂ 3 ವರ್ಷಗಳ ಲೆಕ್ಕ ಪರಿಶೋಧನಾ ವರದಿ (ಸಹಕಾರಿ ಇಲಾಖೆ ನಡೆಸಿದ) ಮತ್ತು ಅವುಗಳ ಅನುಪಾಲನಾ ವರದಿ.

ಇ) ಸಂಘದ ಆರ್ಥಿಕ ಸ್ಥಿತಿಯನ್ನು ದೃಢೀಕರಿಸಲು ಸಂಘದ ಬ್ಯಾಂಕ್ ಖಾತೆಯ ಪಾಸ್ ಪುಸ್ತಕದ ದೃಢೀಕೃತ ಪ್ರತಿ.

ಈ) ಗುತ್ತಿಗೆ ಮೊತ್ತ + ಠೇವಣಿ ಮೊತ್ತದ ನಗದು ಹುಂಡಿ.

ಉ) ಮೀನುಗಾರರ ಸಹಕಾರ ಸಂಘದ ನೋಂದಣಿ ಪತ್ರ, ಬೈಲಾ ಪ್ರತಿ ಮತ್ತು ಗುತ್ತಿಗೆಯನ್ನು ಕೋರಿರುವ ಆಡಳಿತ ಮಂಡಳಿಯ ನೋಟರೀಕರಿಸಿದ ಠರಾವು ಪ್ರತಿ.

2) ಮೀನು ಪಾಶುವಾರು ಹಕ್ಕಿನ ಗುತ್ತಿಗೆಯನ್ನು ಪಡೆಯಲು ಅರ್ಹತೆಯಿರುವ ನೋಂದಾಯಿತ ಮೀನುಗಾರಿಕೆ ಸಹಕಾರ ಸಂಘಗಳು ತಮ್ಮ ಕಾರ್ಯವ್ಯಾಪ್ತಿಯಲ್ಲಿರುವ ಗರಿಷ್ಠ 2 ಕೆರೆ ಅಥವಾ ಅನುಬಂಧ-2ರಲ್ಲಿ ಪಟ್ಟಿ ಮಾಡಿರುವ ಒಂದು ಜಲಾಶಯ (ಗರಿಷ್ಠ 300 ಹೆ. ಜಲವಿಸ್ತೀರ್ಣಕ್ಕೆ ಮೀರದಂತೆ) ಅಥವಾ 2 ನದಿ ಭಾಗಗಳ ಮೀನು ಪಾಶುವಾರು ಹಕ್ಕನ್ನು ಪಡೆಯಲು ಮಾತ್ರ ಅರ್ಹತೆಯನ್ನು ಹೊಂದಿರುತ್ತವೆ.

3) ಹೊಸದಾಗಿ ನೋಂದಾಯಿಸಲ್ಪಟ್ಟ ಮೀನುಗಾರಿಕೆ ಸಹಕಾರ ಸಂಘಗಳು ನೋಂದಾಯಿಸಲ್ಪಟ್ಟ ದಿನಾಂಕದಿಂದ ಒಂದು ವರ್ಷದ ನಂತರವೇ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಪಡೆಯಲು ಅರ್ಹತೆಯನ್ನು ಹೊಂದಿರುತ್ತವೆ.

4) ಜಲಸಂಪನ್ಮೂಲದ ಒಟ್ಟು ಜಲವಿಸ್ತೀರ್ಣದ ಶೇಕಡ 50ರಷ್ಟು ಜಲವಿಸ್ತೀರ್ಣವನ್ನು ಉಪಯುಕ್ತತಾ ಜಲವಿಸ್ತೀರ್ಣ ಪ್ರದೇಶವೆಂದು ಗಣನೆಗೆ ತೆಗೆದುಕೊಂಡು, ಈ ರೀತಿ ಗಣನೆಗೆ ತೆಗೆದುಕೊಂಡ ಜಲವಿಸ್ತೀರ್ಣಕ್ಕೆ ಪ್ರತಿ ಹೆಕ್ಟೇರಿಗೆ ರೂ.500-00ರಂತೆ ಬರುವ ಮೊತ್ತ ಅಥವಾ ಹಿಂದಿನ ಮೂರು ವರ್ಷಗಳ ಸರಾಸರಿ ಆದಾಯ ಇವೆರಡರಲ್ಲಿ ಯಾವುದು ಹೆಚ್ಚೋ ಅದನ್ನು ಪ್ರಥಮ ವರ್ಷದ ಗುತ್ತಿಗೆ ಮೊತ್ತವೆಂದು ನಿಗಧಿಪಡಿಸಲಾಗುವುದು. ಈ ರೀತಿ ನಿಗದಿಪಡಿಸಿದ ಗುತ್ತಿಗೆ ಮೊತ್ತಕ್ಕೆ ಉಳಿದ ನಾಲ್ಕು ವರ್ಷಗಳ ಗುತ್ತಿಗೆ ಅವಧಿಯಲ್ಲಿ ಪ್ರತಿವರ್ಷ ಹಿಂದಿನ ವರ್ಷದ ಗುತ್ತಿಗೆ ಮೊತ್ತಕ್ಕೆ ಶೇಕಡ 5ರಂತೆ ಹೆಚ್ಚಿಸಿ ಗುತ್ತಿಗೆ ಮೊತ್ತವನ್ನು ನಿಗದಿಪಡಿಸಲಾಗುವುದು.

5) ಗುತ್ತಿಗೆದಾರರು ಜಲಸಂಪನ್ಮೂಲದ ಗುತ್ತಿಗೆ ಮೊತ್ತದ ಶೇಕಡ 25ರಷ್ಟು ಹಣವನ್ನು ಭದ್ರತಾ ಠೇವಣಿಯಾಗಿ ಮೊದಲನೆಯ ವರ್ಷದ ಗುತ್ತಿಗೆ ಮೊತ್ತದೊಂದಿಗೆ ಡಿ.ಡಿ. ಮುಖಾಂತರ ಪಾವತಿಸತಕ್ಕದ್ದು. ಯಾವುದೇ ಷರತ್ತಿನ ಅಥವಾ ನಿಬಂಧನೆಯ ಉಲ್ಲಂಘನೆಯಾದಲ್ಲಿ ಸದರಿ ಭದ್ರತಾ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಇಲ್ಲದಿದ್ದಲ್ಲಿ ಈ ಠೇವಣಿ ಹಣವನ್ನು ಬಡ್ಡಿರಹಿತವಾಗಿ ಗುತ್ತಿಗೆ ಅವಧಿಯು ಮುಗಿದ ನಂತರ ಗುತ್ತಿಗೆದಾರರಿಗೆ ಹಿಂದಿರುಗಿಸಲಾಗುವುದು.

6) ಗುತ್ತಿಗೆ ಪಡೆಯಲು ಬಯಸಿದ ಮೀನುಗಾರರ ಸಹಕಾರ ಸಂಘದವರು ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕಿನ ಮೊದಲನೇ ವರ್ಷದ ಗುತ್ತಿಗೆ ಹಣ ಮತ್ತು ಭದ್ರತಾ ಠೇವಣಿಯನ್ನು ಅರ್ಜಿಯೊಂದಿಗೆ ಮುಂಗಡವಾಗಿ ನಗದು ಹುಂಡಿ ಮುಖಾಂತರ ಸಂಬಂಧಪಟ್ಟ ತಾಲ್ಲೂಕು ಮೀನುಗಾರಿಕೆ ಅಧಿಕಾರಿಗೆ ನೀಡಿ, ತಾತ್ಕಾಲಿಕ ರಸೀದಿಯನ್ನು ಪಡೆಯತಕ್ಕದ್ದು. ಜಲಸಂಪನ್ಮೂಲಗಳ ಗುತ್ತಿಗೆಯು ಸಕ್ಷಮ ಪ್ರಾಧಿಕಾರದ ಮಂಜೂರಾತಿಗೆ ಒಳಪಟ್ಟಿರುವುದರಿಂದ, ಮುಂಗಡವಾಗಿ ಪಾವತಿಸಿದ ಬಾಬ್ತು ಯಾವುದೇ ಕಾರಣಕ್ಕೂ ಮೊದಲನೇ ವರ್ಷದ ಗುತ್ತಿಗೆ ಹಣವೆಂದು ಭಾವಿಸಿ ಮೀನು ಪಾಶುವಾರು ಹಕ್ಕನ್ನು ಹೊಂದಲು ಬರುವುದಿಲ್ಲ.

7) ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ಗುತ್ತಿಗೆ ಆದೇಶವನ್ನು ಹೊರಡಿಸಿದ ದಿನಾಂಕವನ್ನು ಗಣನೆಗೆ ತೆಗೆದುಕೊಳ್ಳದೆ ಮೀನು ಪಾಶುವಾರು ಹಕ್ಕಿನ ಅವಧಿಯು ಪ್ರತಿವರ್ಷ ಜುಲೈ 1 ರಿಂದ ಮುಂದಿನ ವರ್ಷದ ಜೂನ್ 30ರವರೆಗೆ ಮಾತ್ರ ಇರುತ್ತದೆ.

8) ಗುತ್ತಿಗೆದಾರರು ಗುತ್ತಿಗೆ ಅವಧಿಯ ಪ್ರತಿ ಮೀನುಗಾರಿಕೆ ಫಸಲಿ ವರ್ಷದ ಪ್ರಾರಂಭದಲ್ಲಿ ಅಂದರೆ ಏಪ್ರಿಲ್ 30ರೊಳಗಾಗಿ ಪೂರ್ಣ ಗುತ್ತಿಗೆ ಮೊತ್ತವನ್ನು ಪಾವತಿ ಮಾಡಿ ಮೀನು ಪಾಶುವಾರು ಹಕ್ಕಿನ ಗುತ್ತಿಗೆಯನ್ನು ನವೀಕರಿಸಿಕೊಳ್ಳತಕ್ಕದ್ದು. ತಪ್ಪಿದ್ದಲ್ಲಿ ಗುತ್ತಿಗೆ ಆದೇಶವನ್ನು ರದ್ದುಗೊಳಿಸಲಾಗುವುದು.

9) ಗುತ್ತಿಗೆ ಪಡೆದ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆದಾರರು ಯಾವುದೇ ಕಾರಣಕ್ಕೂ ವರ್ಗಾಯಿಸತಕ್ಕದ್ದಲ್ಲ ಅಥವಾ ಉಪಗುತ್ತಿಗೆ ನೀಡತಕ್ಕದ್ದಲ್ಲ. ಒಂದು ಪಕ್ಷ ವರ್ಗಾಯಿಸಿದ್ದಲ್ಲಿ ಅಥವಾ ಉಪಗುತ್ತಿಗೆ ನೀಡಿರುವುದು ದಾಖಲೆಗಳಿಂದ ದೃಢಪಟ್ಟಲ್ಲಿ, ಗುತ್ತಿಗೆ ಆದೇಶವನ್ನು ನೀಡಿದ ಸಕ್ಷಮ ಪ್ರಾಧಿಕಾರ ರದ್ದುಗೊಳಿಸುವ ಅಧಿಕಾರವನ್ನು ಹೊಂದಿರುತ್ತಾರೆ.

10) ಗುತ್ತಿಗೆದಾರರು ಪಡೆದ ಜಲಸಂಪನ್ಮೂಲಗಳಲ್ಲಿ ಪ್ರತಿ ಹೆಕ್ಟೇರ್ ಉಪಯುಕ್ತತಾ ಜಲವಿಸ್ತೀರ್ಣಕ್ಕೆ ಕನಿಷ್ಠ 2000 ಬಲಿತ ಬಿತ್ತನೆ ಮೀನುಮರಿಗಳನ್ನು ಬಿತ್ತನೆ ಮಾಡತಕ್ಕದ್ದು. ಮೀನುಗಾರಿಕೆ ಇಲಾಖೆಯು ಅನುಮೋದಿಸಿರುವ ತಳಿಯ ಮೀನುಮರಿಗಳನ್ನು ಮಾತ್ರ ಮೀನುಗಾರಿಕೆ ಇಲಾಖೆಯಿಂದಾಗಲಿ ಅಥವಾ ಮೀನುಗಾರಿಕೆ ಇಲಾಖೆಯಿಂದ ಅನುಮೋದಿಸಲ್ಪಟ್ಟ ಮೀನುಮರಿ ಉತ್ಪಾದನಾ / ಪಾಲನಾ ಕೇಂದ್ರಗಳಿಂದಾಗಲಿ ಖರೀದಿಸಿದ ನಂತರ ಇಲಾಖಾ ಅಧಿಕಾರಿಗಳ ಸಮ್ಮುಖದಲ್ಲಿಯೇ ಬಿತ್ತನೆ ಮಾಡತಕ್ಕದ್ದು. ರಾಜ್ಯದಲ್ಲಿ ಬಿತ್ತನೆ ಮೀನುಮರಿಗಳು ಲಭ್ಯವಿಲ್ಲದಿದ್ದಲ್ಲಿ ಹೊರರಾಜ್ಯಗಳಿಂದ ಮೀನುಮರಿ ಪಡೆಯಲು ಸಂಬಂಧಪಟ್ಟ ತಾಲ್ಲೂಕಿನ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2)ರವರ ಅನುಮತಿ ಪಡೆದು ಆಮದು ಮಾಡಿಕೊಂಡು ಅವರ ಸಮ್ಮುಖದಲ್ಲಿಯೇ ಬಿತ್ತನೆ ಮಾಡತಕ್ಕದ್ದು. ಮೀನುಮರಿಗಳನ್ನು ಬಿತ್ತನೆ ಮಾಡಿರುವ ಬಗ್ಗೆ ಪ್ರತಿವರ್ಷ ಫೋಟೋ ದೃಢೀಕರಣವನ್ನು ಗುತ್ತಿಗೆದಾರರು ತಾಲ್ಲೂಕು ಮಟ್ಟದ ಮೀನುಗಾರಿಕಾ ಅಧಿಕಾರಿಗೆ ನೀಡಬೇಕು.

11) ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಪಡೆದ ಯಾವುದೇ ಗುತ್ತಿಗೆದಾರರು ನಿಷೇಧಿತ ಮೀನು ತಳಿಗಳಾದ ಪ್ರಮುಖವಾಗಿ ಆಫ್ರಿಕನ್ ಕ್ಯಾಟ್ ಫಿಶ್ (ಆಣೆ ಮೀನು), ಚೈನೀಸ್ ಬಿಗ್ ಹೆಡ್ ಮತ್ತು ಇತರೆ ನಿಷೇಧಿತ ಮೀನುಮರಿಗಳ ಬಿತ್ತನೆ ಮಾಡುವುದು ಅಥವಾ ಅಭಿವೃದ್ಧಿಪಡಿಸುವುದು ಅಥವಾ ಮಾರಾಟ ಮಾಡುವುದು ಕಂಡುಬಂದಲ್ಲಿ ಅವರಿಗೆ ನೀಡಲಾದ ಗುತ್ತಿಗೆಯನ್ನು ಕೂಡಲೇ ರದ್ದುಪಡಿಸಿ ಆ ಸಾಲಿನ ಗುತ್ತಿಗೆ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಲ್ಲದೇ ಸಂಬಂಧಪಟ್ಟ ಗುತ್ತಿಗೆದಾರರನ್ನು ಕಪ್ಪುಪಟ್ಟಿಗೆ ಸೇರ್ಪಡಿಸಿ ಅವರಿಗೆ ಮೀನುಗಾರಿಕೆ ಇಲಾಖೆಯಿಂದ ಯಾವುದೇ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಮುಂದಕ್ಕೆ ನೀಡಲಾಗುವುದಿಲ್ಲ.

12) ಗುತ್ತಿಗೆದಾರರು ಗುತ್ತಿಗೆ ಪಡೆದ ಜಲಸಂಪನ್ಮೂಲದಲ್ಲಿ ಮೀನನ್ನು ಹಿಡಿಯುವಾಗ ಸದರಿ ಜಲಸಂಪನ್ಮೂಲದ ಕಟ್ಟೆ, ಏರಿ, ತೂಬು ಮುಂತಾದವುಗಳಿಗೆ ಯಾವುದೇ ರೀತಿಯ ಹಾನಿ ಉಂಟಾಗದಂತೆ ನೋಡಿಕೊಳ್ಳತಕ್ಕದ್ದು. ಹಾನಿ ಉಂಟಾದಲ್ಲಿ ಅಂತಹ ನಷ್ಟಕ್ಕೆ ಅವರನ್ನೇ ಜವಾಬ್ದಾರರನ್ನಾಗಿ ಮಾಡಲಾಗುವುದು.

13) ಗುತ್ತಿಗೆ ಪಡೆದ ಜಲಸಂಪನ್ಮೂಲಗಳಲ್ಲಿ ಗುತ್ತಿಗೆದಾರರು ಸಿಡಿಮದ್ದಿನ ರಾಸಾಯನಿಕ ವಸ್ತುಗಳ ಅಥವಾ ವಿಷದ ಪ್ರಯೋಗವನ್ನಾಗಲಿ ಮಾಡಿ ಮೀನು ಹಿಡಿಯತಕ್ಕದ್ದಲ್ಲ. ಈ ನಿಬಂಧನೆಯನ್ನು ಉಲ್ಲಂಘಿಸಿದ ಗುತ್ತಿಗೆದಾರರ ಗುತ್ತಿಗೆಯನ್ನು ತಕ್ಷಣದಿಂದ ರದ್ದುಪಡಿಸಲಾಗುವುದು.

14) ಮೀನುಗಾರಿಕೆ ಇಲಾಖೆಯ ವ್ಯಾಪ್ತಿಯಲ್ಲಿನ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಪಡೆದ ಮೀನುಗಾರರ ಸಹಕಾರ ಸಂಘಗಳ ಲೆಕ್ಕಪತ್ರಗಳನ್ನು ಮೀನುಗಾರಿಕೆ ಅಧಿಕಾರಿಗಳು ಪರಿಶೋಧನೆ ಮಾಡುವ ಅಧಿಕಾರವನ್ನು ಹೊಂದಿರುತ್ತಾರೆ.

15) ಗುತ್ತಿಗೆದಾರರ ಜಲಸಂಪನ್ಮೂಲಗಳಲ್ಲಿ ಪಂಜರಗಳಲ್ಲಿ ಮೀನುಮರಿಗಳನ್ನು ಸಾಕುವ ಹಕ್ಕು ಮೀನುಗಾರಿಕೆ ಇಲಾಖೆಗೆ ಇರುತ್ತದೆ. ಅಲ್ಲದೇ ಸದರಿ ಜಲಸಂಪನ್ಮೂಲಗಳಲ್ಲಿ ಮೀನುಗಾರಿಕೆ ಸಂಶೋಧನೆ ಮತ್ತು ವಿಸ್ತರಣ ಸಂಬಂಧಪಟ್ಟ ಚಟುವಟಿಕೆಗಳನ್ನು ಕೈಗೊಳ್ಳುವ ಹಕ್ಕು ಮೀನುಗಾರಿಕೆ ಇಲಾಖೆಗೆ ಇರುತ್ತದೆ.

16) ಗುತ್ತಿಗೆದಾರರು ಗುತ್ತಿಗೆ ಪಡೆದ ಜಲಸಂಪನ್ಮೂಲದಲ್ಲಿ ಮೀನು ಹಿಡಿಯುವ ಮೀನುಗಾರರಿಗೆ ಜೀವ ರಕ್ಷಣಾ ಹೊದಿಕೆ (ಲೈಫ್ ಜಾಕೆಟ್) ಮತ್ತು ಜೀವ ವಿಮಾ ಸೌಲಭ್ಯಗಳನ್ನು ಕಡ್ಡಾಯವಾಗಿ ಒದಗಿಸಬೇಕು.

17) ಗುತ್ತಿಗೆದಾರರು ಮೇಲಿನ ಯಾವುದೇ ಷರತ್ತು ಅಥವಾ ನಿಬಂಧನೆಯನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆಗೆ ಪಡೆಯಲಾದ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕಿನ ಗುತ್ತಿಗೆ ಆದೇಶವನ್ನು ರದ್ದುಪಡಿಸಲಾಗುವುದು.

18) ಸಾರ್ವಜನಿಕ ಹಿತದೃಷ್ಟಿಯಿಂದ ಮೀನುಗಾರರ ಸಹಕಾರ ಸಂಘಗಳಿಗೆ ನೀಡಿದ ಜಲಸಂಪನ್ಮೂಲಗಳ ಗುತ್ತಿಗೆ ಅವಧಿಯನ್ನು ಮೊಟಕುಗೊಳಿಸುವ ಅಥವಾ ರದ್ದುಗೊಳಿಸುವ ಅಧಿಕಾರ ಸರ್ಕಾರಕ್ಕಿರುತ್ತದೆ.

19) ಸರ್ಕಾರದಿಂದ/ಮೀನುಗಾರಿಕೆ ಇಲಾಖೆಯಿಂದ ಕಾಲಕಾಲಕ್ಕೆ ವಿಧಿಸಲ್ಪಡುವ ಅಥವಾ ಮಾರ್ಪಡಿಸಲಾಗುವ ಹೆಚ್ಚುವರಿ ಷರತ್ತು ಮತ್ತು ನಿಬಂಧನೆಗಳಿಗೆ ಗುತ್ತಿಗೆದಾರರು ಬದ್ಧರಾಗಿರತಕ್ಕದ್ದು.

-------------

ಗುತ್ತಿಗೆದಾರರ ಸಹಿ

---------------

ಸ್ಥಳ:-

ದಿನಾಂಕ

ಗುತ್ತಿಗೆದಾರರ ಹೆಸರು ಮತ್ತು ಪದನಾಮ

--------------

ವಿಳಾಸ

ಮೊಹರು

ಸಾಕ್ಷಿಗಳು

(1) ಸಹಿ, ಹೆಸರು, ಮತ್ತು ವಿಳಾಸ

(2) ಸಹಿ, ಹೆಸರು, ಮತ್ತು ವಿಳಾಸ

**(ವಿ.ಸೂ. ರೂ.200-00 ಮೌಲ್ಯದ ಛಾಪಾ ಕಾಗದದಲ್ಲಿ ಗುತ್ತಿಗೆದಾರರು ಬರೆದುಕೊಡಬೇಕಾದ ಮುಚ್ಚಳಿಕೆ ಪತ್ರ)**

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ

ಅನುಬಂಧ-12

ಮೀನುಗಾರಿಕೆ ಇಲಾಖೆ

ಸಂ. ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2)ರವರ

ಕಛೇರಿ, ..................... ತಾಲ್ಲೂಕು, ............ಜಿಲ್ಲೆ,

ದಿನಾಂಕ

**ಟೆಂಡರ್ ಮತ್ತು ಹರಾಜು ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ............................ ಜಿಲ್ಲೆಯ ........................ ತಾಲ್ಲೂಕಿನ ಕೆಳಕಂಡ ಸರ್ಕಾರಿ ಜಲಸಂಪನ್ಮೂಲಗಳ (ಕೆರೆಗಳ, ಇತ್ಯಾದಿ) ಮೀನು ಪಾಶುವಾರು ಹಕ್ಕನ್ನು ...................ನೇ ಮೀನುಗಾರಿಕೆ ಫಸಲಿ ವರ್ಷದಿಂದ ...............ನೇ ಮೀನುಗಾರಿಕೆ ಫಸಲಿ ವರ್ಷದವರೆಗೆ (ಅಂದರೆ ದಿನಾಂಕ 01/07/ ರಿಂದ 30/06 ರವರೆಗೆ) ಒಟ್ಟು 5 (ಐದು) ವರ್ಷಗಳ ಅವಧಿಗೆ ಟೆಂಡರು ಮತ್ತು ಹರಾಜು ಮೂಲಕ ಈ ಕೆಳಗೆ ನಮೂದಿಸಿರುವ ದಿನಾಂಕದಂದು ಮತ್ತು ವೇಳೆಯಲ್ಲಿ ಸರ್ಕಾರದ ಮೀನುಗಾರಿಕೆ ಇಲಾಖೆಯ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟಂತೆ ಈ ಕಛೇರಿಯಲ್ಲಿ ವಿಲೇವಾರಿ ಮಾಡಲಾಗುವುದು. ಸದರಿ ಟೆಂಡರು ಮತ್ತು ಹರಾಜಿನಲ್ಲಿ ಭಾಗವಹಿಸಲು ಆಸಕ್ತಿವುಳ್ಳವರು ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ನಿಗದಿತ ದಿನಾಂಕ ಮತ್ತು ವೇಳೆಯೊಳಗಾಗಿ ಈ ಕಛೇರಿಗೆ ಸಲ್ಲಿಸತಕ್ಕದ್ದು. ಟೆಂಡರ್/ಹರಾಜಿನ ಅರ್ಜಿಗೆ ಲಗತ್ತಿಸಿರುವ ಷರತ್ತು ಮತ್ತು ನಿಬಂಧನೆಗಳನ್ನು ಕಡ್ಡಾಯವಾಗಿ ಪಾಲಿಸುವುದಾಗಿ ಯಶಸ್ವಿ ಟೆಂಡರ್‌ದಾರರು/ಬಿಡ್‌ದಾರರು ನಿಗದಿತ ನಮೂನೆಯಲ್ಲಿ ಮುಚ್ಚಳಿಗೆ ಪತ್ರವನ್ನು ಬರೆದು ಕೊಡತಕ್ಕದ್ದು.

**ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡಲು ಪ್ರಸ್ತಾಪಿಸಿರುವ ಜಲಸಂಪನ್ಮೂಲಗಳ ವಿವರಗಳು**

| ಕ್ರ. ಸಂ. | ಜಲಸಂಪನ್ಮೂಲದ ಹೆಸರು | ಗ್ರಾಮದ ಹೆಸರು | ಜಲ ವಿಸ್ತೀರ್ಣ/ ಅಚ್ಚುಕಟ್ಟು ಪ್ರದೇಶ (ಹೆಕ್ಟೇರುಗಳಲ್ಲಿ) | ಭದ್ರತಾ ಠೇವಣಿ ಮೊತ್ತ (ರೂ.) | ಸರ್ಕಾರಿ ಸವಾಲು ಮೊತ್ತ (ರೂ.) |
|---|---|---|---|---|---|
| | | | | | |

ಟೆಂಡರ್ ಅರ್ಜಿಗಳನ್ನು ವಿತರಿಸುವ ದಿನಾಂಕ : (ದಿನಾಂಕ ಮತ್ತು ವೇಳೆ ನಮೂದಿಸುವುದು)

ಟೆಂಡರನ್ನು ಸಲ್ಲಿಸುವ ಕೊನೆಯ ದಿನಾಂಕ : (ದಿನಾಂಕ ಮತ್ತು ವೇಳೆ ನಮೂದಿಸುವುದು)

ಟೆಂಡರ್ ಅರ್ಜಿಗಳನ್ನು ತೆರೆಯುವ ಮತ್ತು

ಹರಾಜು ನಡೆಸುವ ದಿನಾಂಕ ಮತ್ತು ವೇಳೆ : (ದಿನಾಂಕ ಮತ್ತು ವೇಳೆ ನಮೂದಿಸುವುದು)

ಮೀನುಗಾರಿಕೆ ಸಹಾಯಕ ನಿರ್ದೇಶಕರು(ಶ್ರೇಣಿ-2)

................................ ತಾಲ್ಲೂಕು

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ

ಅನುಬಂಧ-13

ಮೀನುಗಾರಿಕೆ ಇಲಾಖೆ

ಟೆಂಡರ್ ಕ್ರ. ಸಂ. ಮೀನುಗಾರಿಕೆ ನಿರ್ದೇಶಕರು (ಶ್ರೇಣಿ-2) ಕಛೇರಿ,

ತಾಲ್ಲೂಕು,

ದಿನಾಂಕ:

"ಗೌಪ್ಯ"

**ಸರ್ಕಾರಿ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಪಡೆಯಲು ಟೆಂಡರ್ ಅರ್ಜಿ**

............................ ಜಿಲ್ಲೆಯ ....................... ತಾಲ್ಲೂಕಿನ ................................ ಜಲಸಂಪನ್ಮೂಲದ (ಕೆರೆ, ಇತ್ಯಾದಿ). ಮೀನು ಪಾಶುವಾರು ಹಕ್ಕನ್ನು ಗರಿಷ್ಠ 5 (ಐದು) ವರ್ಷಗಳ ಅವಧಿಗೆ (ದಿನಾಂಕ 01/07/ ರಿಂದ 30/06/ ರವರೆಗೆ) ಗುತ್ತಿಗೆಗೆ ಪಡೆಯಲು ಟೆಂಡರ್ ಅರ್ಜಿ.

ತಮ್ಮ ಕಛೇರಿಯ ಟೆಂಡರ್/ಹರಾಜು ಪ್ರಕಟಣೆ ಸಂ. ...................................... ದಿನಾಂಕ ...................ರ ಮೇರೆಗೆ ಈ ಕೆಳಗೆ ಸಹಿ ಮಾಡಿರುವ ನಾವು...................................... ಸದರಿ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಪಡೆದುಕೊಳ್ಳಲು ಪ್ರಥಮ ವಾರ್ಷಿಕ ಗುತ್ತಿಗೆ ಮೊತ್ತ ರೂ. ..................... (ರೂಪಾಯಿ .....................) ಮಾತ್ರಗಳನ್ನು ಪಾವತಿಸಲು ನಮಗೆ ಒಪ್ಪಿಗೆ ಇರುತ್ತದೆ. ಅದರಂತೆಯೇ ಇದರೊಂದಿಗೆ ಟೆಂಡರ್ ಬಾಬ್ತು ರೂ. .....................ಗಳ ನಗದು ಹುಂಡಿಯನ್ನು (..................... ಬ್ಯಾಂಕಿನ ಹುಂಡಿ ಸಂ. ..................... ದಿನಾಂಕ ..................... ) ಲಗತ್ತಿಸಿರುತ್ತೇನೆ.

ಈ ಅರ್ಜಿಯೊಂದಿಗೆ ಲಗತ್ತಿಸಿರುವ ಎಲ್ಲಾ ಷರತ್ತು ಮತ್ತು ನಿಬಂಧನೆಗಳಿಗೆ ಹಾಗೂ ಸರ್ಕಾರವು / ಮೀನುಗಾರಿಕೆ ಇಲಾಖೆಯು ಕಾಲಕಾಲಕ್ಕೆ ವಿಧಿಸುವಂತಹ ಮತ್ತಿತರ ಷರತ್ತು ಮತ್ತು ನಿಬಂಧನೆಗಳಿಗೆ ಬದ್ಧನಾಗಿರುತ್ತೇನೆಂದು/ವೆಂದು ಮತ್ತು ಟೆಂಡರ್ / ಹರಾಜಿನಲ್ಲಿ ಯಶಸ್ವಿಗೊಂಡಲ್ಲಿ ನಿಗದಿತ ಮೌಲ್ಯದ ಛಾಪಾಕಾಗದದಲ್ಲಿ ಮುಚ್ಚಳಿಕೆ ಪತ್ರವನ್ನು ಬರೆದು ಕೊಡಲು ಒಪ್ಪಿಗೆ ಇರುತ್ತದೆಂದು ತಿಳಿಸಬಯಸುತ್ತೇನೆ/ತ್ತೇವೆ.

---------------

ದಿನಾಂಕ (ಟೆಂಡರ್‌ದಾರರ ಸಹಿ)

ಸ್ಥಳ

---------------

ಹೆಸರು

ವಿಳಾಸ

ದೂರವಾಣಿ ಸಂಖ್ಯೆ------

(ಪಿ.ಸೂ: ಅರ್ಜಿ ಶುಲ್ಕ ರೂ.100-00)

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ

ಅನುಬಂಧ-14

ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಟೆಂಡರ್-ಕಂ-ಹರಾಜು ಮೂಲಕ ಗುತ್ತಿಗೆಗೆ ಪಡೆದ ಟೆಂಡರುದಾರರು/ಬಿಡ್‌ದಾರರು ಕಡ್ಡಾಯವಾಗಿ ತಿಳಿದುಕೊಳ್ಳಬೇಕಾದ / ಪಾಲಿಸಬೇಕಾದ ಷರತ್ತು ಮತ್ತು ನಿಬಂಧನೆಗಳು

(1) ನಿಗದಿತ ಟೆಂಡರ್ ಅರ್ಜಿಯನ್ನು ಕಛೇರಿ ವೇಳೆಯಲ್ಲಿ ಟೆಂಡರ್ ಅರ್ಜಿ ಶುಲ್ಕ ರೂ.100-00ನ್ನು ಪಾವತಿಸಿ ಪಡೆಯತಕ್ಕದ್ದು. ಪ್ರತಿ ಜಲಸಂಪನ್ಮೂಲಕ್ಕೆ ಪ್ರತ್ಯೇಕ ಟೆಂಡರ್ ಅರ್ಜಿಯನ್ನು ಸಲ್ಲಿಸತಕ್ಕದ್ದು.

(2) ಟೆಂಡರ್ ಮತ್ತು ಹರಾಜಿನಲ್ಲಿ ಭಾಗವಹಿಸುವವರು ಆಯಾ ಜಲಸಂಪನ್ಮೂಲಗಳ ಮುಂದೆ ಸೂಚಿಸಿರುವ ಭದ್ರತಾ ಠೇವಣಿ ಹಣವನ್ನು ಪ್ರತ್ಯೇಕ ನಗದು ಹುಂಡಿಯ (ಡಿ.ಡಿ.) ಮೂಲಕ ಪಾವತಿಸತಕ್ಕದ್ದು. ಟೆಂಡರ್‌ನಲ್ಲಿ ಭಾಗವಹಿಸಿರುವವರು ಸಹ ಮತ್ತೆ ಭದ್ರತಾ ಠೇವಣಿ ಮೊತ್ತ ಪಾವತಿಸದೆ ಹರಾಜಿನಲ್ಲಿ ಭಾಗವಹಿಸಬಹುದು. ಆದರೆ, ಟೆಂಡರ್‌ನಲ್ಲಿ ಭಾಗವಹಿಸದೆ ಬರೀ ಹರಾಜಿನಲ್ಲಿ ಭಾಗವಹಿಸುವವರು ಹರಾಜು ಪ್ರಕ್ರಿಯೆ ಪ್ರಾರಂಭದ ಮುನ್ನ ಭದ್ರತಾ ಠೇವಣಿ ಮೊತ್ತವನ್ನು ನಗದು ಹುಂಡಿ (ಡಿ.ಡಿ.) ಮೂಲಕ ಮಾತ್ರ ಪಾವತಿಸಿ ಭಾಗವಹಿಸಬಹುದು.

(3) ಯಶಸ್ವಿ ಟೆಂಡರ್‌ದಾರರು/ಬಿಡ್‌ದಾರರು ಗುತ್ತಿಗೆಗೆ ಪಡೆದ ಜಲಸಂಪನ್ಮೂಲದ ಉಪಯುಕ್ತತಾ ಜಲವಿಸ್ತೀರ್ಣದ ಶೇ.15ರ ಭಾಗಕ್ಕೆ ಪ್ರತಿ ಹೆಕ್ಟೇರಿಗೆ ರೂ.500.00ರಂತೆ ಬಡ್ಡಿರಹಿತ ಭದ್ರತಾ ಠೇವಣಿ ಮೊತ್ತವನ್ನು ಸಂಬಂಧಪಟ್ಟ ತಾಲ್ಲೂಕು ಮೀನುಗಾರಿಕೆ ಅಧಿಕಾರಿಗೆ ಡಿ.ಡಿ. ಮುಖಾಂತರ ನೀಡತಕ್ಕದ್ದು. ಯಾವುದೇ ಷರತ್ತಿನ ಅಥವಾ ನಿಬಂಧನೆಯ ಉಲ್ಲಂಘನೆಯುಂಟಲ್ಲಿ ಸದರಿ ಭದ್ರತಾ ಠೇವಣಿ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಈ ಭದ್ರತಾ ಠೇವಣಿ ಮೊತ್ತವನ್ನು ಗುತ್ತಿಗೆ ಅವಧಿಯು ಮುಗಿದ ನಂತರ ಟೆಂಡರ್‌ದಾರರು/ಬಿಡ್‌ದಾರರಿಗೆ ಮರುಪಾವತಿಸಲಾಗುವುದು.

(4) ಭರ್ತಿ ಮಾಡಿದ ಟೆಂಡರ್ ಅರ್ಜಿಯನ್ನು ಮೊಹರು ಮಾಡಿದ ಲಕೋಟೆಯಲ್ಲಿಟ್ಟು ಭದ್ರತಾ ಠೇವಣಿ ಮೊಬಲಗಿನ ನಗದು ಹುಂಡಿಯನ್ನು (ಡಿ.ಡಿ.) ಪ್ರತ್ಯೇಕವಾಗಿ ಸಂಬಂಧಪಟ್ಟ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2)ರವರಿಗೆ ನಿಗದಿತ ದಿನಾಂಕ/ವೇಳೆಯೊಳಗಾಗಿ (ಕಛೇರಿಯ ವೇಳೆಯಲ್ಲಿ) ಸಲ್ಲಿಸತಕ್ಕದ್ದು. ಟೆಂಡರನ್ನೊಳಗೊಂಡ ಮೊಹರಾದ ಲಕೋಟೆಯ ಮೇಲೆ "........................ ಕೆರೆಯ ಮೀನು ಪಾಶುವಾರು ಹಕ್ಕು ಪಡೆಯಲು ಟೆಂಡರು" ಎಂದು ಸ್ಪಷ್ಟವಾಗಿ ನಮೂದಿಸಿರತಕ್ಕದ್ದು.

(5) ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಟೆಂಡರ್ ಮತ್ತು ಹರಾಜು ಮೂಲಕ ಗರಿಷ್ಠ ಐದು (05) ವರ್ಷಗಳ ಅವಧಿಗೆ ವಿಲೇವಾರಿ ಮಾಡಲಾಗುವುದು.

(6) ಟೆಂಡರ್ ಮತ್ತು ಹರಾಜನ್ನು ನಡೆಸುವ ವಿಧಾನ:- ಮೊದಲು ಹರಾಜು ನಡೆಸಲಾಗುವುದು. ನಂತರ ಟೆಂಡರ್ ಅರ್ಜಿಗಳನ್ನು ತೆರೆಯಲಾಗುವುದು. ಟೆಂಡರ್‌ನಲ್ಲಿ ನಮೂದಿಸಿರುವ ಅತೀ ಹೆಚ್ಚಿನ ಮೊತ್ತ ಅಥವಾ ಹರಾಜಿನಲ್ಲಿ ಸೂಚಿಸಲಾಗುವ ಅತೀ ಹೆಚ್ಚಿನ ಬಿಡ್ ಮೊತ್ತ ಈ ಎರಡರಲ್ಲಿ ಯಾವುದು ಹೆಚ್ಚಿಗೆ ಇರುವುದೋ ಅದನ್ನು ಪ್ರಥಮ ವಾರ್ಷಿಕ ಗುತ್ತಿಗೆ ಮೊತ್ತವೆಂದು ಪರಿಗಣಿಸಲಾಗುವುದು. ಉಳಿದ ನಾಲ್ಕು ವರ್ಷಗಳಲ್ಲಿ ಪ್ರತಿವರ್ಷ ಹಿಂದಿನ ವರ್ಷದ ಗುತ್ತಿಗೆ ಮೊತ್ತಕ್ಕೆ ಶೇ.5ರಂತೆ ಹೆಚ್ಚಿಸಿ ನಿಗದಿಪಡಿಸಲಾಗುವುದು.

(7) ಟೆಂಡರ್/ಬಿಡ್ ಮೊತ್ತವು ಸರ್ಕಾರಿ ಸವಾಲಿಗಿಂತ ಕಡಿಮೆ ಇದ್ದಲ್ಲಿ, ಟೆಂಡರ್/ಹರಾಜನ್ನು ತಿರಸ್ಕರಿಸಿ ಮರು ಟೆಂಡರ್/ಹರಾಜಿನ ಮೂಲಕ ವಿಲೇವಾರಿ ಮಾಡಲು ಕ್ರಮ ತೆಗೆದುಕೊಳ್ಳಲಾಗುವುದು. 2ನೇ ಬಾರಿಯೂ ಸಹ ಅಖೈರಾದ ಬಿಡ್ ಮೊತ್ತ ಸರ್ಕಾರಿ ಸವಾಲಿಗಿಂತ ಕಡಿಮೆ ಇದ್ದಲ್ಲಿ ಟೆಂಡರು/ಹರಾಜನ್ನು ಮತ್ತೆ ರದ್ದುಗೊಳಿಸಿ 3ನೇ ಬಾರಿಗೆ ಮರು ವಿಲೇಗೊಳಿಸಲಾಗುವುದು. 3ನೇ ಬಾರಿಗೆ ಅಖೈರಾದ ಟೆಂಡರ್ / ಬಿಡ್ ಮೊತ್ತವನ್ನು ಒಪ್ಪಿಕೊಳ್ಳಲಾಗುವುದು.

(8) ಟೆಂಡರ್/ಹರಾಜು ಮುಗಿದ ಕೂಡಲೇ ಅಖೈರಾದ ಅತಿ ಹೆಚ್ಚಿನ ಟೆಂಡರ್/ಬಿಡ್ ಮೊತ್ತವನ್ನು ಯಶಸ್ವಿ ಟೆಂಡರುದಾರರು/ಬಿಡ್‌ದಾರರು ಹರಾಜು ಮಾಡಿದ ಸ್ಥಳದಲ್ಲೇ ಪಾವತಿ ಮಾಡಿ ಸಂಬಂಧಪಟ್ಟ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2)ರವರಿಂದ ಅಧಿಕೃತ ರಸೀದಿಯನ್ನು ಪಡೆಯತಕ್ಕದ್ದು. ತಪ್ಪಿದಲ್ಲಿ ಸದರಿಯವರು ಟೆಂಡರ್-ಕಂ-ಹರಾಜಿನ ಬಗ್ಗೆ ನೀಡಿದ ಭದ್ರತಾ ಠೇವಣಿ ಮೊಬಲಗನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಎರಡನೇ ಅತಿ ಹೆಚ್ಚಿನ ಟೆಂಡರ್‌ದಾರರು/ಬಿಡ್‌ದಾರರು, ಮೊದಲನೇ ಟೆಂಡರುದಾರರು/ಬಿಡ್‌ದಾರರು ಸೂಚಿಸಿದ ಗರಿಷ್ಠ ಟೆಂಡರ್ ಅಥವಾ ಬಿಡ್ ಮೊತ್ತವನ್ನು ಸ್ಥಳದಲ್ಲಿಯೇ ಪಾವತಿಸಲು ಒಪ್ಪಿದಲ್ಲಿ ಮಾತ್ರ ಅವರ ಹೆಸರಿಗೆ ಸದರಿ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ನೀಡಲು ಪರಿಗಣಿಸಲಾಗುವುದು. ಒಂದು ವೇಳೆ ಎರಡನೇ ಅತೀ ಹೆಚ್ಚು ಮೊತ್ತವನ್ನು ಸೂಚಿಸಿದ ಟೆಂಡರ್‌ದಾರರು/ಬಿಡ್‌ದಾರರು ಕೂಡ ಇದಕ್ಕೆ ಒಪ್ಪದಿದ್ದ ಪಕ್ಷದಲ್ಲಿ ಸದರಿ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಮರು ಟೆಂಡರ್ ಮತ್ತು ಹರಾಜು ಮೂಲಕ ವಿಲೇವಾರಿ ಮಾಡಲು ಕ್ರಮ ಕೈಗೊಳ್ಳಲಾಗುವುದು.

(9) [illegible] ರೂ.200.00 ಮೌಲ್ಯದ ಛಾಪಾಕಾಗದದಲ್ಲಿ ನಿಗದಿತ ಮುಚ್ಚಳಿಕೆ ಪತ್ರವನ್ನು (ಅನುಬಂಧ-15) ಬರೆದುಕೊಟ್ಟು ಸಂಬಂಧಪಟ್ಟ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2)ರವರಿಂದ ವಿಲೇವಾರಿ ದೃಢೀಕರಣ ಪತ್ರ ಪಡೆಯತಕ್ಕದ್ದು.

(10) ಟೆಂಡರ್/ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವು ಇಲಾಖಾ ಮೇಲಾಧಿಕಾರಿಗಳಿಗೆ/ಸರ್ಕಾರಕ್ಕೆ ಇರುತ್ತದೆ. ಅಲ್ಲದೆ ಸರ್ಕಾರದ ಹಿತದೃಷ್ಟಿಯಿಂದ ಟೆಂಡರ್ / ಹರಾಜನ್ನು ತಿರಸ್ಕರಿಸಿ ಮರುವಿಲೇವಾರಿ ಮಾಡುವ ಹಕ್ಕು ಮೀನುಗಾರಿಕೆ ಇಲಾಖೆಗೆ ಸೇರಿರುತ್ತದೆ.

(11) <u>ಮೀನುಗಾರಿಕೆ ಫಸಲಿ ವರ್ಷವು ಪ್ರತಿ ವರ್ಷದ ಜುಲೈ 1 ರಿಂದ ಮುಂದಿನ ವರ್ಷದ ಜೂನ್ 30ರವರೆಗೆ</u> ಇರುತ್ತದೆ. ಮೀನು ಪಾಶುವಾರು ಹಕ್ಕನ್ನು ಟೆಂಡರ್/ಹರಾಜು ಮಾಡಿದ ದಿನಾಂಕವನ್ನು ಮತ್ತು ದೃಢೀಕರಣ ಮಾಡಿದ ದಿನಾಂಕವನ್ನು ಗಣನೆಗೆ ತೆಗೆದುಕೊಳ್ಳದೆ ಮೀನು ಪಾಶುವಾರು ಹಕ್ಕಿನ ಅವಧಿಯು ಪ್ರತಿ ವರ್ಷ ಜುಲೈ 1 ರಿಂದ ಮುಂದಿನ ವರ್ಷದ ಜೂನ್ 30ರವರೆಗೆ ಮಾತ್ರ ಇರುತ್ತದೆ.

(12) ಟೆಂಡರ್‌ದಾರರು/ಬಿಡ್‌ದಾರರು ಗುತ್ತಿಗೆ ಅವಧಿಯ ಎರಡನೇ ವರ್ಷದ ಮತ್ತು ತದನಂತರದ ವಾರ್ಷಿಕ ಟೆಂಡರ್ / ಬಿಡ್ ಮೊತ್ತವನ್ನು ಪ್ರತಿ ವರ್ಷ ಏಪ್ರಿಲ್ 30ರೊಳಗಾಗಿ ಸಂಬಂಧಪಟ್ಟ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2)ರವರ ಕಛೇರಿಯಲ್ಲಿ ಪಾವತಿಸಿ ಅಧಿಕೃತ ರಸೀದಿಯನ್ನು ಪಡೆದು ಕೊಳ್ಳತಕ್ಕದ್ದು. ಗುತ್ತಿಗೆಯನ್ನು ನವೀಕರಿಸಿಕೊಳ್ಳದಿದ್ದ ಪ್ರಕರಣದಲ್ಲಿ ಟೆಂಡರ್‌ದಾರರಿಗೆ / ಬಿಡ್‌ದಾರರಿಗೆ ಮೀನು ಪಾಶುವಾರು ಹಕ್ಕು ಇರುವುದಿಲ್ಲ. ಗುತ್ತಿಗೆಗೆ ಪಡೆಯಲಾದ ಮೀನು ಪಾಶುವಾರು ಹಕ್ಕನ್ನು ರದ್ದುಗೊಳಿಸಿ ಮರುವಿಲೇವಾರಿ ಮಾಡಲು ಕ್ರಮ ಕೈಗೊಳ್ಳಲಾಗುವುದು.

(13) ಟೆಂಡರ್‌ದಾರರು/ಬಿಡ್‌ದಾರರು ಗುತ್ತಿಗೆಗೆ ಪಡೆದ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಯಾವುದೇ ಕಾರಣಕ್ಕೂ ಇತರರಿಗೆ ವರ್ಗಾಯಿಸತಕ್ಕದ್ದಲ್ಲ ಹಾಗೂ ಉಪ ಗುತ್ತಿಗೆಗೆ ನೀಡತಕ್ಕದ್ದಲ್ಲ. ಒಂದು ವೇಳೆ ವರ್ಗಾಯಿಸಿದ್ದಲ್ಲಿ ಅಥವಾ ಉಪಗುತ್ತಿಗೆಗೆ ನೀಡಿರುವುದು ದಾಖಲೆಗಳಿಂದ ದೃಢಪಟ್ಟಲ್ಲಿ ಗುತ್ತಿಗೆ ಆದೇಶವನ್ನು ಸಕ್ಷಮ ಪ್ರಾಧಿಕಾರ ರದ್ದುಗೊಳಿಸುವುದು.

(14) ಟೆಂಡರುದಾರರು/ಬಿಡ್ಡುದಾರರು ಗುತ್ತಿಗೆ ಪಡೆದ <u>ಜಲಸಂಪನ್ಮೂಲಗಳಲ್ಲಿ ಪ್ರತಿ ಹೆಕ್ಟೇರ್ ಉಪಯುಕ್ತತಾ ಜಲವಿಸ್ತೀರ್ಣಕ್ಕೆ ಕನಿಷ್ಠ 2000 ಬಲಿತ ಬಿತ್ತನೆ ಮೀನುಮರಿಗಳನ್ನು (70-80 ಎಂ.ಎಂ.) ಬಿತ್ತನೆ ಮಾಡತಕ್ಕದ್ದು.</u> ಮೀನುಗಾರಿಕೆ ಇಲಾಖೆಯಿಂದ ಅನುಮೋದಿತ ತಳಿಯ ಮೀನುಮರಿಗಳನ್ನು ಮಾತ್ರ ಮೀನುಗಾರಿಕೆ ಇಲಾಖೆಯಿಂದಾಗಲೀ ಅಥವಾ ಮೀನುಗಾರಿಕೆ ಇಲಾಖೆಯಿಂದ ಅನುಮೋದಿಸಲ್ಪಟ್ಟ ಮೀನುಮರಿ ಉತ್ಪಾದನಾ/ಪಾಲನಾ ಕೇಂದ್ರಗಳಿಂದಾಗಲೀ ಖರೀದಿಸಿ ಬಿತ್ತನೆ ಮಾಡಿರುವ ಬಗ್ಗೆ ಪ್ರತಿ ವರ್ಷ ಫೋಟೋ ದೃಢೀಕರಣವನ್ನು ತಾಲ್ಲೂಕು ಮಟ್ಟದ ಮೀನುಗಾರಿಕಾ ಅಧಿಕಾರಿಗಳಿಗೆ ನೀಡಬೇಕು. ರಾಜ್ಯದಲ್ಲಿ ಬಿತ್ತನೆ ಮೀನುಮರಿಗಳು ಲಭ್ಯವಿಲ್ಲದಿದ್ದಲ್ಲಿ ಮಾತ್ರ ಹೊರರಾಜ್ಯಗಳಿಂದ ಮೀನುಮರಿ ಪಡೆಯಲು ಸಂಬಂಧಪಟ್ಟ ತಾಲ್ಲೂಕಿನ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2)ರವರ ಅನುಮತಿ ಪಡೆದು ಆಮದು ಮಾಡಿಕೊಂಡು ಅವರ ಸಮ್ಮುಖದಲ್ಲಿಯೇ ಬಿತ್ತನೆ ಮಾಡತಕ್ಕದ್ದು.

(15) ನಿಷೇಧಿತ ಮೀನು ತಳಿಗಳಾದ ಪ್ರಮುಖವಾಗಿ ಆಫ್ರಿಕನ್ ಕ್ಯಾಟ್ ಫಿಶ್ (ಆಣೆ ಮೀನು), ಚೈನೀಸ್ ಬಿಗ್ ಹೆಡ್, ತಿಲಾಪಿಯಾ (ಜಿಲೇಬಿ) ಮತ್ತು ಇತರೆ ನಿಷೇಧಿತ ಮೀನು ತಳಿಗಳ ಬಿತ್ತನೆ ಮಾಡುವುದು ಅಥವಾ ಅಭಿವೃದ್ಧಿಪಡಿಸುವುದು ಅಥವಾ ಮಾರಾಟ ಮಾಡುವುದು ಕಂಡುಬಂದಲ್ಲಿ ಅಂತಹ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕಿನ ಗುತ್ತಿಗೆಯನ್ನು ರದ್ದುಪಡಿಸಿ ಗುತ್ತಿಗೆದಾರರು ಪಾವತಿಸಿದ ಠೇವಣಿ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ, ಸಂಬಂಧಪಟ್ಟ ಗುತ್ತಿಗೆದಾರರನ್ನು ಕಪ್ಪುಪಟ್ಟಿಗೆ ಸೇರ್ಪಡಿಸಿ ಅವರಿಗೆ ಮೀನುಗಾರಿಕೆ ಇಲಾಖೆಯಿಂದ ಯಾವುದೇ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಮುಂದಕ್ಕೆ ನೀಡಲಾಗುವುದಿಲ್ಲ.

(16) ಗುತ್ತಿಗೆಗೆ ಪಡೆಯಲಾದ ಜಲಸಂಪನ್ಮೂಲಗಳಲ್ಲಿ ಸಿಡಿಮದ್ದುಗಳ, ರಾಸಾಯನಿಕ ವಸ್ತುಗಳ ಮತ್ತು ವಿಷದ ಪ್ರಯೋಗದಿಂದ ಮೀನು ಹಿಡಿಯುವುದನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ.

(17) ಯಶಸ್ವಿ ಟೆಂಡರ್‌ದಾರರು/ಬಿಡ್‌ದಾರರು ಜಲಸಂಪನ್ಮೂಲಗಳಲ್ಲಿ ಹಿಡಿದ ಮೀನಿನ ಅಂಕಿ ಅಂಶಗಳನ್ನು ಪ್ರತಿವರ್ಷ ಮೀನುಗಾರಿಕೆ ಇಲಾಖೆಯ ಸಂಬಂಧಪಟ್ಟ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ರವರಿಗೆ ಒದಗಿಸತಕ್ಕದ್ದು.

(18) ಟೆಂಡರ್-ಕಂ-ಹರಾಜಿನ ಮುಖಾಂತರ ವಿಲೇಗೊಳಿಸಲಾದ ಮೀನು ಪಾಶುವಾರು ಹಕ್ಕಿನ ದೃಢೀಕರಣವು ಮೇಲಾಧಿಕಾರಿಗಳ ಅನುಮೋದನೆಗೆ ಒಳಪಟ್ಟಿರುತ್ತದೆ.

(19) ಯಶಸ್ವಿ ಟೆಂಡರ್‌ದಾರರು/ಬಿಡ್‌ದಾರರು ಜಲಸಂಪನ್ಮೂಲಗಳಲ್ಲಿ ಮೀನು ಅಭಿವೃದ್ಧಿಪಡಿಸುವಾಗ ಹಿಡಿಯುಕೊಳ್ಳುವಾಗ ಜಲಸಂಪನ್ಮೂಲಗಳ ಕಟ್ಟೆಯ ಏರಿ, ತೂಬು ಮುಂತಾದವುಗಳಿಗೆ ಯಾವುದೇ ರೀತಿಯ ಹಾನಿಯಾಗದಂತೆ ನೋಡಿಕೊಳ್ಳತಕ್ಕದ್ದು. ಹೀಗೆ ಸಂಭವಿಸುವ ನಷ್ಟಗಳಿಗೆಲ್ಲಕ್ಕೂ ಗುತ್ತಿಗೆದಾರರನ್ನೇ ಹೊಣೆಗಾರರನ್ನಾಗಿ ಮಾಡಲಾಗುವುದು.

(20) ಟೆಂಡರ್/ಹರಾಜಿನ ಮೂಲಕ ಜಲಸಂಪನ್ಮೂಲಗಳ ವಿಲೇವಾರಿಯು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳಿಗೆ, ಷರತ್ತುಗಳಿಗೆ ಹಾಗೂ ನಿಬಂಧನೆಗಳಿಗೆ ಒಳಪಟ್ಟಿರುವುದಲ್ಲದೆ ಸರ್ಕಾರವು/ಮೀನುಗಾರಿಕೆ ಇಲಾಖೆಯು ಕಾಲಕಾಲಕ್ಕೆ ವಿಧಿಸಬಹುದಾದ ಮತ್ತು ಮಾರ್ಪಡಿಸಬಹುದಾದ ಹೆಚ್ಚುವರಿ ನಿಯಮಗಳಿಗೆ, ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

(21) ಯಾವುದೇ ನಿಯಮದ ಉಲ್ಲಂಘನೆಯಾದಲ್ಲಿ, ಗುತ್ತಿಗೆಗೆ ಪಡೆಯಲಾದ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ರದ್ದುಪಡಿಸುವ ಮತ್ತು ಮರುವಿಲೇವಾರಿ ಮಾಡುವ ಅಧಿಕಾರವು ಮೀನುಗಾರಿಕೆ ಇಲಾಖೆಗೆ ಇರುತ್ತದೆ.

(22) ಗುತ್ತಿಗೆದಾರರು ಗುತ್ತಿಗೆ ಪಡೆದ ಜಲಸಂಪನ್ಮೂಲಗಳಲ್ಲಿ ಮೀನು ಹಿಡಿಯುವ ಮೀನುಗಾರರಿಗೆ ಜೀವ ರಕ್ಷಣಾ ಕವಚ (ಲೈಫ್ ಜಾಕೆಟ್) ಹಾಗೂ ವಿಮಾ ಸೌಲಭ್ಯವನ್ನು ಕಡ್ಡಾಯವಾಗಿ ಒದಗಿಸುವುದು.

(23) ಗುತ್ತಿಗೆಗೆ ಪಡೆಯಲಾದ ಜಲಸಂಪನ್ಮೂಲದಲ್ಲಿ ಸಂಶೋಧನೆ, ವಿಸ್ತರಣೆ ಮತ್ತು ಇತರೆ ಉತ್ತೇಜನ ಪೂರ್ವಕ ಚಟುವಟಿಕೆಗಳನ್ನು ಕೈಗೊಳ್ಳುವ ಹಕ್ಕು ಮೀನುಗಾರಿಕೆ ಇಲಾಖೆಗೆ ಇರುತ್ತದೆ.

ಮೇಲಿನ ಎಲ್ಲಾ ಷರತ್ತು ಮತ್ತು ನಿಬಂಧನೆಗಳಿಗೆ ಬದ್ಧರಾಗಿರುತ್ತೇನೆಂದು ದೃಢೀಕರಿಸುತ್ತೇವೆ.

ಸ್ಥಳ:-

ದಿನಾಂಕ:-

ಯಶಸ್ವಿ ಟೆಂಡರ್‌ದಾರರ/ಬಿಡ್‌ದಾರರ
ಸಹಿ ಮತ್ತು ಹೆಸರು
ಪೂರ್ಣ ವಿಳಾಸ
ದೂರವಾಣಿ ಸಂಖ್ಯೆ.

ಸಾಕ್ಷಿಗಳು

(1)

(2)

(3)

**(ವಿ.ಸೂ:- ರೂ.200-00ರ ಮೌಲ್ಯದ ಛಾಪ ಕಾಗದದಲ್ಲಿ ಟೆಂಡರ್‌ದಾರರು/ಬಿಡ್‌ದಾರರು ಅನುಬಂಧ-15ರ ಮುಚ್ಚಳಿಕೆ ಪತ್ರದೊಡನೆ ಬರೆದುಕೊಡಬೇಕು)**

**ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ**

**ಅನುಬಂಧ-15**

**(ಮೀನುಗಾರಿಕೆ ಇಲಾಖೆ)**

**ಸರ್ಕಾರಿ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಟೆಂಡರ್-ಕಂ-ಹರಾಜು ಮುಖಾಂತರ ಗುತ್ತಿಗೆಗೆ ಪಡೆದ ಯಶಸ್ವಿ ಟೆಂಡರ್‌ದಾರರು/ಬಿಡ್‌ದಾರರು ನಿಗದಿತ ಛಾಪಾ ಕಾಗದದಲ್ಲಿ ಬರೆದುಕೊಡುವ ಮುಚ್ಚಳಿಕೆ ಪತ್ರ**

.............................. ಜಿಲ್ಲೆಯ ........................ ತಾಲ್ಲೂಕಿನ ................................ ಗ್ರಾಮಕ್ಕೆ ಸೇರಿದ ................. ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಸನ್ ಎರಡು ಸಾವಿರದ ........................ ನೇ ಇಸವಿ .................. ಮಾಹೆಯ ..............................ನೇ ದಿನಾಂಕದಲ್ಲಿ ನಡೆದ ಬಹಿರಂಗ ಟೆಂಡರ್ / ಹರಾಜು ಮೂಲಕ ಅತೀ ಹೆಚ್ಚಿನ ಸವಾಲು ಮಾಡಿ ಗುತ್ತಿಗೆಗೆ ಪಡೆದು ಈ ದಿನ ಅಂದರೆ ದಿನಾಂಕ ................................ ರಂದು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ................................ ತಾಲ್ಲೂಕು ಇವರಿಗೆ ನಾನು/ನಾವು ಖುದ್ದು ಬರೆದು ಕೊಟ್ಟು ಮುಚ್ಚಳಿಕೆ ಪತ್ರ.

ಸದರಿ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ದಿನಾಂಕ ...................... ರಿಂದ ..................... ದಿನಾಂಕದವರೆಗೆ ಗುತ್ತಿಗೆ ಮೂಲಕ ಪಡೆದಿರುತ್ತೇನೆ/ವೆ. ಇದರ ಬಿಡ್/ಟೆಂಡರ್ ಮೊತ್ತ ಅಂದರೆ ರೂ. ...................ಗಳನ್ನು ಮತ್ತು ಇದಕ್ಕೆ ಸಂಬಂಧಿಸಿದ ಭದ್ರತಾ ಠೇವಣಿ ಮೊತ್ತ ರೂ....................ಗಳನ್ನು ಅಂದರೆ ಈ ರೀತಿಯಾಗಿ ಒಟ್ಟು ರೂ. ................. ಗಳನ್ನು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ........................ ರವರಿಗೆ ಬ್ಯಾಂಕ್ ನಗದು ಹುಂಡಿ (.......................... ಬ್ಯಾಂಕಿನ ಡಿ.ಡಿ. ಸಂ. .................. ದಿನಾಂಕ ..............................ರ) ಮುಖಾಂತರ ಪಾವತಿ ಮಾಡಿ ರಸೀದಿ ಪಡೆದಿರುತ್ತೇನೆ/ವೆ.

ಈ ಜಲಸಂಪನ್ಮೂಲದಲ್ಲಿ ಮೀನು ಕೃಷಿ ಕೈಗೊಳ್ಳುವಾಗ ಗುತ್ತಿಗೆಗೆ ಪಡೆದಿರುವ ಪೂರ್ಣ ಅವಧಿಯಲ್ಲಿ ಈ ಮುಚ್ಚಳಿಕೆ ಪತ್ರಕ್ಕೆ ಲಗತ್ತಿಸಿದ ಎಲ್ಲಾ ಷರತ್ತು ಮತ್ತು ನಿಬಂಧನೆಗಳನ್ನು (ಈ ಆದೇಶದ ಅನುಬಂಧ-14 ರಲ್ಲಿ ಲಗತ್ತಿಸಿದೆ) ಹಾಗೂ ಸರ್ಕಾರವು / ಮೀನುಗಾರಿಕೆ ಇಲಾಖೆಯು ಕಾಲಕಾಲಕ್ಕೆ ವಿಧಿಸಬಹುದಾದ ಹೆಚ್ಚುವರಿ ಷರತ್ತು ಮತ್ತು ನಿಬಂಧನೆಗಳನ್ನು ಕಡ್ಡಾಯವಾಗಿ ಪಾಲಿಸಲು ಬದ್ಧರಾಗಿರುತ್ತೇನೆ/ಬದ್ಧರಾಗಿರುತ್ತೇವೆ. ಒಂದು ವೇಳೆ ಸದರಿ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ನನಗೆ/ನಮಗೆ ನೀಡಿದ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕಿನ ಗುತ್ತಿಗೆ ಆದೇಶವನ್ನು ರದ್ದುಗೊಳಿಸುವ ಹಾಗೂ ಠೇವಣಿ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕ್ರಮವು ನನಗೆ/ನಮಗೆ ಒಪ್ಪಿಗೆಯಾಗಿರುತ್ತದೆ.

ಈ ಗುತ್ತಿಗೆ ಅವಧಿಯ ನಂತರ ಸದರಿ ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕು ನನಗೆ/ನಮಗೆ ಇರುವುದಿಲ್ಲವೆಂಬುದು ಕೂಡ ನನಗೆ/ನಮಗೆ ಮನವರಿಕೆಯಾಗಿರುತ್ತದೆ.

ಸ್ಥಳ:-

ದಿನಾಂಕ:

ಯಶಸ್ವಿ ಟೆಂಡರ್‌ದಾರರು/ಬಿಡ್‌ದಾರರ
ಸಹಿ ಮತ್ತು ಹೆಸರು
ಪೂರ್ಣವಿಳಾಸ
ದೂರವಾಣಿ ಸಂಖ್ಯೆ

ಸಾಕ್ಷಿಗಳು

(1)

(2)

(3)

**(ವಿ.ಸೂ:- ರೂ.200-00ರ ಮೌಲ್ಯದ ಛಾಪ ಕಾಗದದಲ್ಲಿ ಟೆಂಡರ್‌ದಾರರು / ಬಿಡ್‌ದಾರರು ಬರೆದು ಕೊಡಬೇಕಾದ ಮುಚ್ಚಳಿಕೆ ಪತ್ರ)**

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ

ಅನುಬಂಧ-16

ನದಿಗಳು/ಜಲಾಶಯಗಳಲ್ಲಿ/ಅಳಿವೆಗಳಲ್ಲಿ ಮೀನು ಹಿಡಿಯಲು ಪರವಾನಗಿ ಕೋರಿ ಅರ್ಜಿ

| ಪಾಸ್ ಪೋರ್ಟ್ ಅಳತೆಯ ಇತ್ತೀಚಿನ ಭಾವಚಿತ್ರ |
|---|

| | | |
|---|---|---|
| 1 | ಅರ್ಜಿದಾರರ ಹೆಸರು | |
| 2 | ವಿಳಾಸ ಮತ್ತು ದೂರವಾಣಿ ಸಂಖ್ಯೆ. | |
| 3 | ವಾಸ ಸ್ಥಳ ದೃಢೀಕರಣ ಪತ್ರ<br>(ಪಡಿತರ ಚೀಟಿ/ಆಧಾರ್ ಕಾರ್ಡ್ /ಚುನಾವಣಾ ಗುರುತಿನ ಚೀಟಿ/ ಸರ್ಕಾರದ ಇತರೆ ದಾಖಲಾತಿ ಗಳನ್ನು ಲಗತ್ತಿಸುವುದು) | |
| 4 | ಪರವಾನಗಿ ಕೋರಲಾದ ಜಲಪ್ರದೇಶ | |
| 5 | ಈ ಹಿಂದೆ ಈ ಜಲಾಶಯ/ ನದಿಯಲ್ಲಿ ಮೀನು ಹಿಡಿಯಲು ಪರವಾನಗಿ ಪಡೆದಿದ್ದಲ್ಲಿ ಅದರ ಪ್ರತಿ | |
| 6 | ಪರವಾನಗಿ ಕೋರುವ ಮೀನು ಹಿಡಿಯುವ ವಿಧಾನ | |
| 7 | ಪರವಾನಗಿಯ ನಿಗದಿತ ಶುಲ್ಕದ ಡಿ.ಡಿ (ಬ್ಯಾಂಕ್ ನಗದು ಹುಂಡಿ)/ ನಗದು ರಶೀದಿ ಸಂಖ್ಯೆ. | |

ಸ್ಥಳ:-

ದಿನಾಂಕ:- ಅರ್ಜಿದಾರನ ಸಹಿ

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ

ಅನುಬಂಧ-17

ಮೀನುಗಾರಿಕೆ ಇಲಾಖೆ

ಮೀನು ಹಿಡಿಯುವುದಕ್ಕೆ ಪರವಾನಗಿ

| ಪಾಸ್ ಪೋರ್ಟ್ ಅಳತೆಯ ಇತ್ತೀಚಿನ ಭಾವಚಿತ್ರ |
|---|

| | | |
|---|---|---|
| 1 | ಪರವಾನಗಿದಾರನ ಹೆಸರು | |
| 2 | ಪರವಾನಗಿದಾರನ ವಿಳಾಸ | |
| 3 | ಮೀನು ಹಿಡಿಯಲು ಅವಕಾಶ ಕೊಟ್ಟಿರುವ ಪ್ರದೇಶ | |
| 4 | ಯಾವ ವಿಧಾನದಲ್ಲಿ ಮೀನು ಹಿಡಿಯಲು ಪರವಾನಗಿ | |
| 5 | ಪರವಾನಗಿ ಶುಲ್ಕ ಮತ್ತು ರಶೀದಿ ಸಂಖ್ಯೆ. | |
| 6 | ಪರವಾನಗಿ ಪ್ರಾರಂಭದ ದಿನಾಂಕ | |
| 7 | ಪರವಾನಗಿ ಮುಕ್ತಾಯದ ದಿನಾಂಕ | |

ದಿನಾಂಕ ------------------ ಪರವಾನಗಿ ನೀಡುವ ಅಧಿಕಾರಿಯ ಸಹಿ

ಸ್ಥಳ:- ಹೆಸರು ಮತ್ತು ಪದನಾಮ

ಮೊಹರು

(ಷರತ್ತು ಮತ್ತು ನಿಬಂಧನೆಗಳು ಹಿಂಬದಿಯಲ್ಲಿ)

ಷರತ್ತು ಮತ್ತು ನಿಬಂಧನೆಗಳು

1. ಪರವಾನಗಿ ಅವಧಿಯು "ಮೀನುಗಾರಿಕೆ ವರ್ಷಕ್ಕೆ" ಮಾತ್ರ ಸೀಮಿತವಾಗಿರುತ್ತದೆ. ಮೀನುಗಾರಿಕೆ ವರ್ಷದ ಯಾವುದೇ ಸಮಯದಲ್ಲಿ ಪರವಾನಗಿ ನೀಡಿದರೂ ಸಹ ಮೀನುಗಾರಿಕೆ ವರ್ಷದ ಅಂತ್ಯಕ್ಕೆ ಅಂದರೆ ಜೂನ್ 30ಕ್ಕೆ ಪರವಾನಗಿ ಕೊನೆಗೊಳ್ಳುತ್ತದೆ.
2. ಪರವಾನಗಿಗಳನ್ನು ಒಬ್ಬರಿಂದ ಒಬ್ಬರಿಗೆ ವರ್ಗಾಯಿಸುವಂತಿಲ್ಲ.
3. ಪರವಾನಗಿದಾರರು ಮೀನುಗಾರಿಕೆ ನಿಷೇಧದ ಅವಧಿಯಲ್ಲಿ (ಜೂನ್ 1 ರಿಂದ ಜುಲೈ 30ರವರೆಗೆ) ಮೀನು ಹಿಡಿಯುವುದನ್ನು ಪೂರ್ಣವಾಗಿ ನಿಷೇಧಿಸಲಾಗಿದೆ. ಮತ್ತು ಈ ಅವಧಿಯಲ್ಲಿ ಕ್ರೀಡಾ ಮೀನುಗಾರರಿಗೆ ಪರವಾನಗಿಗಳನ್ನು ವಿತರಿಸಲಾಗುವುದಿಲ್ಲ.
4. ನದಿ, ಅಳಿವೆ ಮತ್ತು ಜಲಾಶಯಗಳಲ್ಲಿ ಮೀನು ಹಿಡಿಯುವ ಎಲ್ಲಾ ಸಮಯದಲ್ಲಿ ಪರವಾನಗಿದಾರರು ಪರವಾನಗಿ ಪ್ರತಿ ಮತ್ತು ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹೊಂದಿರಬೇಕು.

5. ಪರವಾನಗಿ ಪಡೆದ ಮೀನುಗಾರರು ಪರವಾನಗಿಯಲ್ಲಿ ತಿಳಿಸಿರುವ ವಿಧಾನದಲ್ಲಿ ಮಾತ್ರ ಮೀನು ಶಿಕಾರಿ ಮಾಡುವುದು. ಡೈನಾಮೈಟ್, ವಿಷಕಾರಕ ಅಥವಾ ರಾಸಾಯನಿಕ ವಸ್ತುಗಳನ್ನು ಉಪಯೋಗಿಸಿ ಮೀನುಗಾರಿಕೆ ಮಾಡಿದ್ದಲ್ಲಿ ಪರವಾನಗಿಯನ್ನು ತಕ್ಷಣದಿಂದ ರದ್ದು ಮಾಡಲಾಗುವುದು.

6. ಪರವಾನಗಿ ಹೊಂದಿದ ಮೀನುಗಾರರು ಪರವಾನಗಿಯಲ್ಲಿ ನಿಗಧಿಪಡಿಸಿದ ಪ್ರದೇಶದಲ್ಲಿ ಮಾತ್ರ ಮೀನುಗಾರಿಕೆಯನ್ನು ಮಾಡಲು ಹಕ್ಕುಳ್ಳವರಾಗಿರುತ್ತಾರೆ.

7. ಪರವಾನಗಿಯಲ್ಲಿ ನಿಗಧಿಪಡಿಸಿರುವ ನಿಗಧಿತ ಕಣ್ಣಿನ ಅಳತೆಯ ಬಲೆಗಳನ್ನು ಮಾತ್ರ ಉಪಯೋಗಿಸಿ ಮೀನು ಹಿಡಿಯುವುದು.

8. ನದಿ, ಅಳಿವೆ ಮತ್ತು ಜಲಾಶಯದಲ್ಲಿ ಎಳೆ ಬಲೆಗಳು, ಮಾರಿ ಬಲೆಗಳು ಮತ್ತು ಇನ್ನಿತರೆ ಪ್ರಕಾರದ ಎಳೆ ಬಲೆಗಳನ್ನು ಉಪಯೋಗಿಸಿ ಮೀನು ಹಿಡಿಯುವುದನ್ನು ನಿಷೇಧಿಸಲಾಗಿದೆ.

9. ಪರವಾನಗಿದಾರರು ಮೀನು ಹಿಡಿಯವ ಸಮಯದಲ್ಲಿ ಜೀವ ರಕ್ಷಕ ಸಾಧನವಾದ ಲೈಫ್ ಜಾಕೆಟ್‌ನ್ನು ಧರಿಸುವುದು ಕಡ್ಡಾಯ ಮತ್ತು ಜೀವ ರಕ್ಷಣೆಗೆ ಎಲ್ಲಾ ಮುಂಜಾಗರೂಕತೆ ಕ್ರಮಗಳನ್ನು ಕೈಗೊಳ್ಳುವುದು.

10. ಮೀನುಗಳ ಸಂರಕ್ಷಣೆಗಾಗಿ "ಮತ್ಸ್ಯಧಾಮ" ಗಳೆಂದು ಗುರುತಿಸಿದ ಸ್ಥಳಗಳಲ್ಲಿ ಕಡ್ಡಾಯವಾಗಿ ಮೀನುಗಾರಿಕೆಯನ್ನು ಪೂರ್ಣವಾಗಿ ನಿಷೇಧಿಸಿದೆ. ಮತ್ಸ್ಯಧಾಮಗಳಲ್ಲಿ ಪರವಾನಗಿದಾರರು ಮೀನುಗಾರಿಕೆ ಮಾಡಿದ್ದಲ್ಲಿ ಅಂತಹ ಪರವಾನಗಿಯನ್ನು ತಕ್ಷಣದಿಂದ ರದ್ದುಗೊಳಿಸುವುದು ಹಾಗೂ ಅವರ ಹೆಸರನ್ನು ಕಪ್ಪುಪಟ್ಟಿಗೆ ಸೇರಿಸಿ ಮುಂದಿನ ಸಾಲುಗಳಿಗೆ ಪರವಾನಗಿಯನ್ನು ನಿರಾಕರಿಸಲಾಗುವುದು.

11. ಪರವಾನಗಿದಾರರು ಮೀನು ಹಿಡಿಯವಾಗ ಜಲಾಶಯದ ಅಳಿವೆಗಳ ಮತ್ತು ನದಿಯ ಭದ್ರತೆ ಮತ್ತು ನೀರಿನ ಸ್ವಚ್ಛತೆ (ಮಾಲಿನ್ಯಕರಣಗೊಳ್ಳದಂತೆ) ನೋಡಿಕೊಳ್ಳತಕ್ಕದ್ದು. ಪರವಾನಗಿಗೆ ಸಂಬಂಧಪಟ್ಟಂತೆ ಭದ್ರತೆ ಪ್ರಾಧಿಕಾರ ಅಥವಾ ಇಲಾಖೆಯು ವಿಧಿಸುವ ಹೆಚ್ಚುವರಿ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಬಾರದು.

12. ಪರವಾನಗಿದಾರರು ನದಿ, ಅಳಿವೆ ಮತ್ತು ಜಲಾಶಯದಲ್ಲಿ ಹಿಡಿದ ಮೀನಿನ ಅಂಕಿ ಅಂಶಗಳನ್ನು ಪ್ರತಿ ತಿಂಗಳು ಸಂಬಂಧಪಟ್ಟ ತಾಲ್ಲೂಕು ಮೀನುಗಾರಿಕೆ ಅಧಿಕಾರಿಗೆ ಒದಗಿಸತಕ್ಕದ್ದು.

13. ಪ್ರಕೃತಿ ವಿಕೋಪದಿಂದ ಪರವಾನಗಿದಾರರಿಗೆ ನಷ್ಟ ಅಥವಾ ಸಲಕರಣೆಗಳಿಗೆ ಹಾನಿ ಉಂಟಾದಲ್ಲಿ ಅಥವಾ ನಷ್ಟ ಉಂಟಾದಲ್ಲಿ ಅಂತಹ ನಷ್ಟಗಳಿಗೆ ಇಲಾಖೆಯು ಜವಾಬ್ದಾರರಾಗುವುದಿಲ್ಲ.

14. ಸಂಶೋಧನೆಗಾಗಿ ಮೀನುಗಳಿಗೆ " ಟ್ಯಾಗ್ " ಮಾಡಿದ ಮೀನುಗಳು ಬಲೆಯಲ್ಲಿ ಸಿಕ್ಕಿದ್ದಲ್ಲಿ ಅಂತಹ ಮೀನುಗಳನ್ನು ಮತ್ತೆ ನೀರಿಗೆ ವಾಪಸ್ಸು ಬಿಡುವುದು ಅಥವಾ ಅಂತಹ ಮೀನುಗಳನ್ನು ತಾಲ್ಲೂಕು ಮೀನುಗಾರಿಕೆ ಅಧಿಕಾರಿಗೆ ಒಪ್ಪಿಸತಕ್ಕದ್ದು.

**ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014ರ**

**ಅನುಬಂಧ-18**

ಕಡತ ಸಂಖ್ಯೆ:

**ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ವಿಲೇ ಮಾಡುವ ಬಗ್ಗೆ ಚೆಕ್‌ಲಿಸ್ಟ್**

**(ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿಯು ನೀಡತಕ್ಕದ್ದು)**

| | | | | | | |
|---|---|---|---|---|---|---|
| 1 | ಜಲಸಂಪನ್ಮೂಲದ ಹೆಸರು ಮತ್ತು ಪೂರ್ಣ ವಿಳಾಸ | | | | | |
| 2 | ಜಲಸಂಪನ್ಮೂಲದ ವಿಸ್ತೀರ್ಣ | 1) ಅಚ್ಚುಕಟ್ಟು---------- ಹೆ. | | | | |
| | | 2) ಜಲವಿಸ್ತೀರ್ಣ------- ಹೆ. | | | | |
| 3 | ಕಳೆದ 5 ವರ್ಷಗಳ ಅವಧಿಯ ವಿಲೇವಾರಿ ವಿವರ (ಗುತ್ತಿಗೆಗೆ ಪಡೆದಿದ್ದ ಗುತ್ತಿಗೆದಾರರ / ಟೆಂಡರುದಾರರ / ಬಿಡ್‌ದಾರರ ಹೆಸರು ಮತ್ತು ಪೂರ್ಣ ವಿಳಾಸ ಹಾಗೂ ವಿಲೇವಾರಿ ವಿಧಾನ (ಗುತ್ತಿಗೆಯ ಮುಖಾಂತರವೇ ಅಥವಾ ಟೆಂಡರ್-ಕಂ-ಹರಾಜು ಮುಖಾಂತರವೇ) | ವರ್ಷ | ವಿಲೇವಾರಿ ವಿಧಾನ | ಗುತ್ತಿಗೆ ದಾರರ ಹೆಸರು /ವಿಳಾಸ | ಗುತ್ತಿಗೆ ಮೊತ್ತ | ಸರ್ಕಾರಕ್ಕೆ ಪಾವತಿಸಿದ ವಿವರ |
| | | | | | | |
| | | | | | | |
| | | | | | | |
| 4 | ಈ ಹಿಂದೆ ಗುತ್ತಿಗೆ ನೀಡಿದ ಪ್ರಾಧಿಕಾರ, ಆದೇಶ ಸಂ., ದಿನಾಂಕ, ಮತ್ತು ಅವಧಿ (ಈ ಹಿಂದೆ ಗುತ್ತಿಗೆ ನೀಡಿದ ಆದೇಶದ ಪ್ರತಿ ಲಗತ್ತಿಸುವುದು) | | | | | |
| 5 | ಪ್ರಸಕ್ತ ಸಾಲಿಗೆ ಹೊಸದಾಗಿ ಗುತ್ತಿಗೆ ಕೋರುತ್ತಿರುವ ಗುತ್ತಿಗೆದಾರ ಸಂಘಗಳ ಹೆಸರು ಮತ್ತು ಪೂರ್ಣ ವಿಳಾಸ. (ಪ್ರತ್ಯೇಕವಾಗಿ ನೀಡಬಹುದು) | | | | | |

R.N.I. No. KARBIL/2001/47147 POSTAL REG. No. RNP/KA/BGS/2202/2011-13
Licensed to post without prepayment WPP No. 297



| | | | | |
|---|---|---|---|---|
| 6 | ಈಗಾಗಲೇ ಅವರು ಗುತ್ತಿಗೆ ಪಡೆದಿರುವ ಗುತ್ತಿಗೆ ನೀಡಲು ಪ್ರಸ್ತಾಪಿಸಲಾದ ಜಲಸಂಪನ್ಮೂಲಗಳ ವಿವರಗಳು | ಕೆರೆಯ ಹೆಸರು | ಗ್ರಾಮ/ತಾಲ್ಲೂಕು | ವಿಸ್ತೀರ್ಣ (ಹೆಕ್ಟೇರ್) |
| | | | | |
| 7 | ಪ್ರಸ್ತುತ ನಿಗದಿಪಡಿಸಲಾದ ಗುತ್ತಿಗೆ ಮೊತ್ತ + ಠೇವಣಿ ಮೊತ್ತ. (ಪಾವತಿಸಿರುವ ಬಗ್ಗೆ ದಾಖಲಾತಿಗಳನ್ನು ಲಗತ್ತಿಸುವುದು) | | | |
| 8 | ಗುತ್ತಿಗೆಗೆ ಕೋರಲಾಗಿರುವ ಅವಧಿ (ಎಷ್ಟು ವರ್ಷಗಳಿಗೆ) | | | |
| 9 | ಗುತ್ತಿಗೆಗೆ ಕೋರಲಾದ ಪ್ರಕಟಣೆ ಲಗತ್ತಿಸುವುದು | | | |
| 10 | ಟೆಂಡರ್ / ಹರಾಜು ಪ್ರಕಟಣೆ ಲಗತ್ತಿಸುವುದು. | | | |
| 11 | ಟೆಂಡರ್/ಹರಾಜು ಪತ್ರಿಕಾ ಪ್ರಕಟಣೆ ಲಗತ್ತಿಸುವುದು. | | | |
| 12 | ಟೆಂಡರ್/ಹರಾಜು ನಡೆಸಿದ ದಿನಾಂಕ | | | |
| 13 | ಟೆಂಡರ್/ಹರಾಜಿನಲ್ಲಿ ಭಾಗವಹಿಸಿದ ವ್ಯಕ್ತಿಗಳು /ಸಂಘ ಸಂಸ್ಥೆಗಳ ವಿವರ (ಪ್ರತ್ಯೇಕವಾಗಿ ನೀಡುವುದು) | | | |
| 14 | ಮೂಲ ಹರಾಜು ಪಟ್ಟಿ ಲಗತ್ತಿಸುವುದು | | | |
| 15 | ಮೂಲ ಹರಾಜು ಇಸ್ತಿಹಾರ್ ಲಗತ್ತಿಸುವುದು. | | | |
| 16 | ಮೂಲ ಟೆಂಡರ್ ಅರ್ಜಿಗಳನ್ನು ಲಗತ್ತಿಸುವುದು. | | | |
| 17 | ಗುತ್ತಿಗೆ/ಟೆಂಡರ್/ಹರಾಜು ಇಲಾಖೆ ನೀತಿ ನಿಯಮಗಳಿಗೆ ಅನುಗುಣವಾಗಿದೆಯೇ? | | | |
| 18 | ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿಯ ಅಭಿಪ್ರಾಯ ಮತ್ತು ಶಿಫಾರಸ್ಸು | | | |

ದಿನಾಂಕ :–

ಸ್ಥಳ:–

ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2),
........................ ತಾಲ್ಲೂಕು

ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು/ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–1)
(ಜಿಲ್ಲಾಮಟ್ಟದ ಮೀನುಗಾರಿಕೆ ಅಧಿಕಾರಿಗಳ ಶಿಫಾರಸ್ಸು)

ದಿನಾಂಕ:–

ಸ್ಥಳ:–

ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು/
ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–1)
........................ಜಿಲ್ಲೆ

PR.201
SC.1000

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59



**ಕರ್ನಾಟಕ ಸರ್ಕಾರ**

ಸಂಖ್ಯೆ: ಪಸಂಮೀ 141 ಮೀಇಇ 2018

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ
ಬೆಂಗಳೂರು ದಿನಾಂಕ: 13.12.2018

**ಇವರಿಂದ** :-
ಸರ್ಕಾರದ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
ಬೆಂಗಳೂರು.

32
O/S
14/12/18

**ಇವರಿಗೆ :-**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ಸುವರ್ಣ ವಿಧಾನ ಸೌಧ,
ಬೆಳಗಾವಿ.

ಮಾನ್ಯರೇ,

ವಿಷಯ:- ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ. ಬಿ.ಸಿ.ನಾಗೇಶ್ (ತಿಪಟೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1038 ಕ್ಕೆ ಉತ್ತರಿಸುವ ಬಗ್ಗೆ.

****

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ. ಬಿ.ಸಿ.ನಾಗೇಶ್ (ತಿಪಟೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1038 ಕ್ಕೆ ಕನ್ನಡ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

**ತಮ್ಮ ನಂಬುಗೆಯ,**

13/12/18
**(ಎಂ. ಧನಂಜಯ)**
**ಪೀಠಾಧಿಕಾರಿ-2,**
**ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,**
**(ಪಶುಸಂಗೋಪನೆ-ಎ)**

17/12/18

**ಪ್ರತಿ:**
ಮಾನ್ಯ ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವರ ಆಪ್ತ ಕಾರ್ಯದರ್ಶಿ, ಸುವರ್ಣಸೌಧ, ಬೆಳಗಾವಿ.

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1038

2) ಸದಸ್ಯರ ಹೆಸರು : ಶ್ರೀ ಬಿ.ಸಿ ನಾಗೇಶ್(ತಿಪಟೂರು)

3) ಉತ್ತರಿಸುವ ದಿನಾಂಕ : 14-12-2018

4) ಉತ್ತರಿಸಬೇಕಾದ ಸಚಿವರು : ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವರು

| ಪ್ರಶ್ನೆ | ಉತ್ತರ |
|---|---|
| **ಅ.** ರಾಜ್ಯದಲ್ಲಿಕಳೆದ ಮೂರು ವರ್ಷಗಳಿಂದ ಎಷ್ಟು ಕೆರೆಗಳಲ್ಲಿ ಮೀನು ಹಿಡಿಯಲು ಹರಾಜು ಮಾಡಲಾಗುತ್ತಿದೆ. (ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ಕೆರೆಗಳಲ್ಲಿ ಮೀನು ಹಿಡಿಯಲು ಹರಾಜು ಮಾಡಲಾಗಿರುವ ಕೆರೆಗಳ ಜಿಲ್ಲಾವಾರು, ತಾಲ್ಲೂಕುವಾರು ಮಾಹಿತಿಯನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ. |
| **ಆ.** ಈ ಕೆರೆಗಳನ್ನು ಹರಾಜು ಮಾಡಲು ಸರ್ಕಾರಕ್ಕೆ ತಗಲಿದ ವೆಚ್ಚ ಎಷ್ಟು, ಎಷ್ಟು ಮೊತ್ತಕ್ಕೆ ಹರಾಜು ಮಾಡಲಾಗಿದೆ(ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ಸದರಿ ಕೆರೆಗಳನ್ನು ಹರಾಜು ಮಾಡಲು ಸರ್ಕಾರಕ್ಕೆ ತಗಲಿದ ವೆಚ್ಚ ಮತ್ತು ಹರಾಜು ಮಾಡಲಾದ ಮೊತ್ತಗಳ ವಿವರಗಳನ್ನು ಅನುಬಂಧ-2 ರಲ್ಲಿ ಒದಗಿಸಲಾಗಿದೆ. |
| **ಇ.** ಇಲಾಖೆಯ ಸಿಬ್ಬಂದಿಗಳಿಗೆ ಮತ್ತುಇತರೆ ವೆಚ್ಚಗಳಿಗೆ ವರ್ಷವಾರು ಪಾವತಿಸುತ್ತಿರುವ ವೇತನ ಮತ್ತುಇತರೆ ಭತ್ಯೆಗಳು ಎಷ್ಟು? (ವರ್ಷವಾರು ವಿವರ ನೀಡುವುದು) | ಇಲಾಖೆ ಸಿಬ್ಬಂದಿಗಳಿಗೆ ಪಾವತಿಸುತ್ತಿರುವ ವೇತನ ಮತ್ತು ಇತರೆ ಭತ್ಯೆಗಳನ್ನು ಅನುಬಂಧ- 3 ಒದಗಿಸಲಾಗಿದೆ. |

ಸಂಖ್ಯೆ: ಪಸಂಮೀ 141 ಮೀಇಇ 2018

(ವೆಂಕಟರಾವ್ ನಾಡಗೌಡ)
ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವರು

ಅನುಬಂಧ-1

ಕಳೆದ ಮೂರು ವರ್ಷಗಳಿಂದ ಕೆರೆಗಳಲ್ಲಿ ಮೀನು ಹಿಡಿಯಲು ಹರಾಜು ಮಾಡಲಾಗಿರುವ ಕೆರೆಗಳ ಜಿಲ್ಲಾವಾರು, ತಾಲ್ಲೂಕುವಾರು ಮಾಹಿತಿ

| ಕ್ರ ಸಂ | ಜಿಲ್ಲೆ | ತಾಲ್ಲೂಕು | 2015-16 | 2016-17 | 2017-18 |
|---|---|---|---|---|---|
| 1 | ಬೀದರ್ | ಬೀದರ್ | 19 | 29 | 25 |
| | | ಔರಾದ್ | 28 | 28 | 25 |
| | | ಭಾಲ್ಕಿ | 7 | 7 | 7 |
| | | ಬಸವಕಲ್ಯಾಣ | 13 | 12 | 10 |
| | | ಹುಮನಾಬಾದ್ | 2 | 6 | 0 |
| | | ಒಟ್ಟು | 69 | 82 | 67 |
| 2 | ಬಾಗಲಕೋಟೆ | ಬಾದಾಮಿ | 7 | 5 | 3 |
| | | ಬಾಗಲಕೋಟೆ | 1 | 1 | - |
| | | ಹುನಗುಂದ | 5 | 5 | 5 |
| | | ಜಮಖಂಡಿ | 3 | 3 | 2 |
| | | ಮುಧೋಳ | 1 | 1 | 1 |
| | | ಬೀಳಗಿ | 0 | - | - |
| | | ಒಟ್ಟು | 17 | 15 | 11 |
| 3 | ಬೆಂಗಳೂರು ಗ್ರಾಮಾಂತರ | ಹೊಸಕೋಟೆ | 8 | 5 | 19 |
| | | ದೇವನಹಳ್ಳಿ | 6 | 4 | 11 |
| | | ದೊಡ್ಡಬಳ್ಳಾಪುರ | 32 | 25 | 30 |
| | | ನೆಲಮಂಗಲ | 16 | 15 | 19 |
| | | ಒಟ್ಟು | 62 | 49 | 79 |
| 4 | ಚಿಕ್ಕಮಗಳೂರು | ಚಿಕ್ಕಮಗಳೂರು | 17 | 14 | 14 |
| | | ಕಡೂರು | 22 | 21 | 21 |
| | | ತರೀಕೆರೆ | 23 | 21 | 21 |
| | | ನರಸಿಂಹರಾಜಪುರ | 1 | 1 | 1 |
| | | ಮೂಡಿಗೆರೆ | 1 | 1 | 1 |
| | | ಒಟ್ಟು | 64 | 58 | 58 |
| 5 | ಉತ್ತರಕನ್ನಡ | ಕಾರವಾರ | 2 | 2 | 2 |
| | | ಜೋಯಿಡಮುಂಡಗೋಡ | - | - | - |
| | | ಮುಂಡಗೋಡ | 23 | 23 | 23 |
| | | ಸಿದ್ದಾಪುರ | 2 | 2 | 2 |
| | | ಶಿರಸಿ | 17 | 17 | 17 |
| | | ಹಳಿಯಾಳ | 24 | 27 | 30 |
| | | ಒಟ್ಟು | 68 | 71 | 74 |
| 6 | ಹಾಸನ | ಅರಸೀಕೆರೆ | 11 | 6 | 5 |
| | | ಹಾಸನ | 17 | 13 | 14 |
| | | ಚನ್ನರಾಯಪಟ್ಟ | 7 | 12 | 13 |
| | | ಅರಕಲಗೂಡು | 14 | 16 | - |
| | | ಹೊಳೇನರಸೀಪುರ | 10 | 9 | 10 |
| | | ಆಲೂರು | 4 | 4 | 4 |
| | | ಬೇಲೂರು | 26 | 19 | 20 |
| | | ಸಕಲೇಶಪುರ | - | - | - |
| | | ಒಟ್ಟು | 89 | 79 | 66 |
| 7 | ದಕ್ಷಿಣಕನ್ನಡ | ಈ ಜಿಲ್ಲೆಯಲ್ಲಿಯಾವುದೇ ಇಲಾಖೆ ಕೆರೆಗಳು ಇರುವುದಿಲ್ಲ. ಆದ್ದರಿಂದ ಸದರಿಜಿಲ್ಲೆಗೆ ವರದಿ ಶೂನ್ಯವೆಂದು ಪರಿಗಣಿಸುವುದು. | | | |
| 8 | ಗದಗ್ | ಮುಂಡರಗಿ | 7 | 8 | - |
| | | ಗದಗ | 3 | 1 | - |
| | | ರೋಣ | 5 | 6 | - |
| | | ಶಿರಹಟ್ಟಿ | 2 | 3 | - |
| | | ಒಟ್ಟು | 17 | 18 | |
| 9 | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | 23 | 18 | 22 |
| | | ಬಾಗೇಪಲ್ಲಿ | 38 | 33 | 37 |
| | | ಗೌರಿಬಿದನೂರು | 87 | 34 | 64 |
| | | ಚಿಂತಾಮಣಿ | 25 | 18 | 21 |

| | | | | | |
|---|---|---|---|---|---|
| | | [illegible] | 15 | 9 | 14 |
| | | [illegible] | 27 | 12 | 15 |
| | | ಒಟ್ಟು | 215 | 106 | 151 |
| 10 | ಯಾದಗಿರಿ | ಯಾದಗಿರಿ | 38 | 23 | 27 |
| | | ಶಹಾಪುರ | 10 | 9 | – |
| | | ಸುರಪುರ | – | – | 2 |
| | | ಒಟ್ಟು | 48 | 9 | 2 |
| 11 | ಬೆಂಗಳೂರುನಗರ | ಬೆಂಗಳೂರು ಉತ್ತರ | 43 | 39 | 46 |
| | | ಬೆಂಗಳೂರು ದಕ್ಷಿಣ/ಪೂರ್ವ | 83 | 61 | 80 |
| | | ಆನೇಕಲ್ | 20 | 18 | 30 |
| | | ಒಟ್ಟು | 146 | 118 | 156 |
| 12 | ಉಡುಪಿ | ಕಾರ್ಕಳ | 1 | – | – |
| | | ಉಡುಪಿ | – | 1 | – |
| | | ಒಟ್ಟು | 1 | 1 | – |
| 13 | ಧಾರವಾಡ | ಧಾರವಾಡ | 44 | ‘42 | 42 |
| | | ಹುಬ್ಬಳ್ಳಿ | 15 | 13 | 16 |
| | | ಕಲಘಟಗಿ | 37 | 45 | 45 |
| | | ಕುಂದಗೋಳ | 1 | 1 | 1 |
| | | ನವಲಗುಂದ | – | – | – |
| | | ಒಟ್ಟು | 97 | 101 | 104 |
| 14 | ಬಳ್ಳಾರಿ | ಬಳ್ಳಾರಿ | – | – | – |
| | | ಸಿರಗುಪ್ಪ | – | – | – |
| | | ಸಂಡೂರು | 14 | 14 | 14 |
| | | ಹೊಸಪೇಟೆ | 4 | 3 | 3 |
| | | ಕೂಡ್ಲಿಗಿ | 24 | 14 | 20 |
| | | ಹಗರಿಬೊಮ್ಮನಹಳ್ಳಿ | 8 | 9 | 9 |
| | | ಹೂವಿನಹಡಗಲಿ | 6 | 8 | 8 |
| | | ಒಟ್ಟು | 56 | 48 | 54 |
| 15 | ಚಾಮರಾಜನಗರ | ಚಾಮನರಾಜನಗರ | 19 | 22 | 22 |
| | | ಗುಂಡ್ಲುಪೇಟೆ | 13 | 10 | 10 |
| | | ಕೊಳ್ಳೇಗಾಲ | 9 | 10 | 10 |
| | | ಯಳಂದೂರು | 7 | 9 | 9 |
| | | ಒಟ್ಟು | 48 | 51 | 51 |
| 16 | ಮೈಸೂರು | ಹುಣಸೂರು | 17 | 14 | 198 |
| | | ಕೆ.ಆರ್.ನಗರ | 6 | 4 | 5 |
| | | ಟಿ.ನರಸೀಪುರ | 6 | 7 | 8 |
| | | ನಂಜನಗೂಡು | 7 | 5 | 9 |
| | | ಮೈಸೂರು | 1 | 1 | – |
| | | ಹೆಚ್.ಡಿ.ಕೋಟೆ | 9 | 6 | 8 |
| | | ಪಿರಿಯಾಪಟ್ಟಣ | 4 | 3 | 8 |
| | | ಒಟ್ಟು | 50 | 40 | 56 |
| 17 | ಚಿತ್ರದುರ್ಗ | ಚಿತ್ರದುರ್ಗ | 24 | 19 | 15 |
| | | ಹಿರಿಯೂರು | 29 | 24 | 35 |
| | | ಹೊಸದುರ್ಗ | 11 | 12 | 12 |
| | | ಹೊಳಲ್ಕೆರೆ | 19 | 19 | 19 |
| | | ಚಳ್ಳಕೆರೆ | 18 | 13 | 28 |
| | | ಮೊಳಕಾಲ್ಮೂರು | 8 | 7 | 7 |
| | | ಒಟ್ಟು | 109 | 94 | 116 |
| 18 | ಹಾವೇರಿ | ಬ್ಯಾಡಗಿ | 16 | 11 | 11 |
| | | ಹಾವೇರಿ | 15 | 12 | 12 |
| | | ಹಾನಗಲ್ | 64 | 55 | 55 |
| | | ಹಿರೇಕೆರೂರು | 42 | 30 | 30 |
| | | ರಾಣೇಬೆನ್ನೂರು | 15 | 12 | 16 |
| | | ಶಿಗ್ಗಾಂವ್ | 13 | 11 | 11 |
| | | ಸವಣೂರು | 6 | 4 | 4 |
| | | ಒಟ್ಟು | 171 | 135 | 139 |

| | | | | | |
|---|---|---|---|---|---|
| 19 | ರಾಯಚೂರು | ರಾಯಚೂರು | 19 | 19 | – |
| | | ದೇವದುರ್ಗ | 8 | 9 | – |
| | | ಮಾನ್ವಿ | 3 | 4 | – |
| | | ಲಿಂಗಸೂಗುರು | 16 | 16 | – |
| | | ಸಿಂಧನೂರು | – | – | – |
| | | ಒಟ್ಟು | 46 | 46 | – |
| 20 | ಕೋಲಾರ | ಬಂಗಾರಪೇಟೆ | 5 | 4 | 11 |
| | | ಮಾಲೂರು | 7 | 6 | 10 |
| | | ಕೋಲಾರ | 5 | 3 | 43 |
| | | ಶ್ರೀನಿವಾಸಪುರ | 12 | 12 | 23 |
| | | ಮುಳಬಾಗಿಲು | 2 | 5 | 31 |
| | | ಒಟ್ಟು | 31 | 30 | 118 |
| 21 | ರಾಮನಗರ | ರಾಮನಗರ | 14 | 13 | 15 |
| | | ಚನ್ನಪಟ್ಟಣ | 30 | 19 | 27 |
| | | ಕನಕಪುರ | 24 | 16 | 20 |
| | | ಮಾಗಡಿ | 19 | 17 | 28 |
| | | ಒಟ್ಟು | 87 | 65 | 90 |
| 22 | ತುಮಕೂರು | ತುಮಕೂರು | 32 | 16 | 31 |
| | | ಗುಬ್ಬಿ | 31 | 23 | 26 |
| | | ಕುಣಿಗಲ್ | 22 | 19 | 27 |
| | | ಕೊರಟಗೆರೆ | 26 | 20 | 27 |
| | | ಮಧುಗಿರಿ | 23 | 22 | 30 |
| | | ಶಿರಾ | 37 | 32 | 43 |
| | | ಚಿಕ್ಕನಾಯಕನಹಳ್ಳಿ | 24 | 20 | 21 |
| | | ತಿಪಟೂರು | 14 | 11 | 11 |
| | | ಪಾವಗಡ | 14 | 13 | 19 |
| | | ತುರುವೇಕೆರೆ | 15 | 14 | 14 |
| | | ಒಟ್ಟು | 238 | 190 | 249 |
| 23 | ದಾವಣಗೆರೆ | ದಾವಣಗೆರೆ | 11 | 11 | 12 |
| | | ಹರಿಹರ | 1 | 1 | – |
| | | ಹರಪನಹಳ್ಳಿ | 16 | 17 | 5 |
| | | ಹೊನ್ನಾಳಿ | 11 | 10 | – |
| | | ಚನ್ನಗಿರಿ | 29 | 29 | – |
| | | ಜಗಳೂರು | 3 | 1 | 6 |
| | | ಒಟ್ಟು | 71 | 68 | 23 |
| 24 | ಬೆಳಗಾವಿ | ಬೆಳಗಾವಿ | 20 | 16 | 18 |
| | | ಗೋಕಾಕ | 4 | 3 | 3 |
| | | ಬೈಲಹೊಂಗಲ | 25 | 28 | 28 |
| | | ಸವದತ್ತಿ | 5 | 7 | 7 |
| | | ರಾಮದುರ್ಗ | 7 | 16 | 16 |
| | | ಚಿಕ್ಕೋಡಿ | 6 | 3 | 5 |
| | | ಹುಕ್ಕೇರಿ | 9 | 8 | 10 |
| | | ಖಾನಾಪೂರ | 25 | 18 | 18 |
| | | ಅಥಣಿ | 10 | 9 | 9 |
| | | ರಾಯಭಾಗ | 3 | 2 | 2 |
| | | ಒಟ್ಟು | 114 | 110 | 116 |
| 25 | ಕಲಬುರಗಿ | ಕಲಬುರಗಿ | 16 | 18 | 7 |
| | | ಆಳಂದ | 15 | 15 | 8 |
| | | ಜೇವರ್ಗಿ | 3 | 4 | 3 |
| | | ಅಫಜಲಪುರ | 4 | 5 | 4 |
| | | ಚಿಂಚೋಳಿ | 6 | 2 | – |
| | | ಚಿತ್ತಾಪುರ | 7 | 1 | – |
| | | ಸೇಡಂ | 4 | 1 | – |
| | | ಒಟ್ಟು | 55 | 46 | 22 |
| 26 | ಶಿವಮೊಗ್ಗ | ಭದ್ರಾವತಿ | 43 | 46 | 47 |
| | | ಶಿವಮೊಗ್ಗ | 82 | 84 | 86 |

| | | | | | |
|---|---|---|---|---|---|
| | | ಶಿಕಾರಿಪುರ | 129 | 125 | 125 |
| | | ತೀರ್ಥಹಳ್ಳಿ | 10 | 10 | 10 |
| | | ಸಾಗರ | 19 | 27 | 28 |
| | | ಹೊಸನಗರ | 5 | 11 | 11 |
| | | ಸೊರಬ | 93 | 81 | 5 |
| | | ಒಟ್ಟು | 381 | 384 | 312 |
| 27 | ವಿಜಯಪುರ | ವಿಜಯಪುರ | 26 | 27 | 28 |
| | | ಇಂಡಿ | 12 | 28 | 29 |
| | | ಸಿಂದಗಿ | 12 | 18 | 20 |
| | | ಮುದ್ದೇಬಿಹಾಳ | 13 | 19 | 19 |
| | | ಬಸವನಬಾಗೇವಾಡಿ | 10 | 14 | 18 |
| | | ಒಟ್ಟು | 73 | 106 | 114 |
| 28 | ಮಂಡ್ಯ | ಮಂಡ್ಯ | 17 | 17 | 17 |
| | | ಮದ್ದೂರು | 34 | 37 | 40 |
| | | ಮಳವಳ್ಳಿ | 16 | 18 | 22 |
| | | ನಾಗಮಂಗಲ | 32 | 30 | 30 |
| | | ಕೆ.ಆರ್.ಪೇಟೆ | 18 | 16 | 19 |
| | | ಪಾಂಡವಪುರ | 6 | 5 | 5 |
| | | ಶ್ರೀರಂಗಪಟ್ಟಣ | – | – | – |
| | | ಒಟ್ಟು | 123 | 123 | 133 |
| 29 | ಕೊಡಗು | ಮಡಿಕೇರಿ | – | – | – |
| | | ವಿರಾಜಪೇಟೆ | – | – | – |
| | | ಸೋಮವಾರಪೇಟೆ | 6 | 6 | 6 |
| | | ಒಟ್ಟು | 6 | 6 | 6 |
| 30 | ಕೊಪ್ಪಳ | ಕೊಪ್ಪಳ | 12 | 12 | 12 |
| | | ಯಲಬುರ್ಗಾ | 9 | 9 | 9 |
| | | ಗಂಗಾವತಿ | 10 | 10 | 10 |
| | | ಕುಷ್ಟಗಿ | 18 | 18 | 18 |
| | | ಒಟ್ಟು | 49 | 49 | 49 |
| | | ಒಟ್ಟು | 2601 | 2298 | 2416 |

ಮೀನುಗಾರಿಕೆ ನಿರ್ದೇಶಕರು

ಅನುಬಂಧ-2

ಕಳೆದ ಮೂರು ವರ್ಷಗಳಿಂದ ಮೀನು ಹಿಡಿಯಲು ಹರಾಜು ಮೂಲಕ ವಿಲೇವಾರಿ ಮಾಡಲಾದ ಕೆರೆಗಳ ಸಂಖ್ಯೆ ವಿವರ

| ಕ್ರ ಸಂ | ಜಿಲ್ಲೆ | ತಾಲ್ಲೂಕು | 2015-16 | | 2016-17 | | 2017-18 | |
|---|---|---|---|---|---|---|---|---|
| | | | ವೆಚ್ಚ | ಹರಾಜು ಮಾಡಲಾದ ಮೊತ್ತ | ವೆಚ್ಚ | ಹರಾಜು ಮಾಡಲಾದ ಮೊತ್ತ | ವೆಚ್ಚ | ಹರಾಜು ಮಾಡಲಾದ ಮೊತ್ತ |
| 1 | ಶಿವಮೊಗ್ಗ | ಭದ್ರಾವತಿ | 12860 | 588739 | 8413 | 2800 | 4707 | 764645 |
| | | ಶಿವಮೊಗ್ಗ | 8458 | 1564945 | 10432 | 1723433 | - | - |
| | | ಶಿಕಾರಿಪುರ | 7000 | 3146535 | 7500 | 3021077 | 6000 | - |
| | | ತೀರ್ಥಹಳ್ಳಿ | 4992 | 86309 | 8958 | 90810 | - | - |
| | | ಸಾಗರ | 10000 | 234739 | 6000 | 90435 | 6000 | 60000 |
| | | ಹೊಸನಗರ | - | 5492 | - | 29579 | - | 56645 |
| | | ಸೊರಬ | 8000 | 712497 | 16000 | 647363 | 8000 | 47000 |
| | | ಒಟ್ಟು | 51310 | 6339256 | 57303 | 5605497 | 24707 | 928290 |
| 2 | ಬಾಗಲಕೋಟೆ | ಬಾದಾಮಿ | 9000 | 30103 | - | 18995 | - | - |
| | | ಬಾಗಲಕೋಟೆ | - | 4350 | - | 4410 | - | - |
| | | ಹುನಗುಂದ | - | 170325 | - | 178841 | - | - |
| | | ಆಮಖಂಡಿ | 7500 | 15015 | - | 15766 | - | - |
| | | ಮುದೋಳ | - | 6825 | - | 7166 | - | - |
| | | ಬೀಳಗಿ | - | | - | - | - | - |
| | | ಒಟ್ಟು | 16500 | 226618 | | 225178 | | |
| 3 | ಬೆಂಗಳೂರು ಗ್ರಾಮಾಂತರ | ಹೊಸಕೋಟೆ | 12073 | 258556 | 7259 | 133052 | 21723 | 2306010 |
| | | ದೇವನಹಳ್ಳಿ | 9158 | 87756 | 6158 | 63949 | 18653 | 163000 |
| | | ದೊಡ್ಡಬಳ್ಳಾಪುರ | 7144 | 803888 | 15018 | 1247491 | 13753 | 20200950 |
| | | ನೆಲಮಂಗಲ | 7144 | 373004 | 6053 | 389827 | 12121 | 151700 |
| | | ಒಟ್ಟು | 35519 | 1523204 | 34488 | 1834319 | 66250 | 22821660 |
| 4 | ಚಿಕ್ಕಮಗಳೂರು | ಚಿಕ್ಕಮಗಳೂರು | 16800 | 271971 | | 208036 | 1800 | - |
| | | ಕಡೂರು | 8280 | 442146 | 1920 | 46439 | 1500 | - |
| | | ತರೀಕೆರೆ | 8560 | 936730 | 7480 | 1044367 | 1500 | - |
| | | ನರಸಿಂಹರಾಜಪುರ | - | 59115 | - | 62071 | - | - |
| | | ಮೂಡಿಗೆರೆ | - | 2048 | - | 2150 | 0 | - |
| | | ಒಟ್ಟು | 33640 | 1712010 | 9400 | 1780763 | 4800 | - |
| 5 | ಉತ್ತರಕನ್ನಡ | ಕಾರವಾರ | - | - | - | - | - | - |
| | | ಜೋಯಿಡ | - | - | - | - | - | - |
| | | ಮುಂಡಗೋಡ | 1500 | 337667 | 1200 | 295390 | 1200 | - |
| | | ಸಿದ್ದಾಪುರ | - | - | - | - | - | - |
| | | ಶಿರಸಿ | 3648 | 80430 | 960 | 99179 | 4587 | 93896 |
| | | ಹಳಿಯಾಳ | - | 200938 | - | 133798 | - | 7116 |
| | | ಒಟ್ಟು | 5148 | 619035 | 2160 | 528367 | 5787 | 101012 |
| 6 | ಹಾಸನ | ಅರಸೀಕೆರೆ | 1596 | 956232 | 1680 | 100656 | 5548 | 2500 |
| | | ಹಾಸನ | 4597 | 284988 | 4608 | 299987 | 2710 | 2500 |
| | | ಚನ್ನರಾಯಪಟ್ಟಣ | 1544 | 264139 | 1560 | 278041 | 2400 | 1500 |
| | | ಅರಕಲಗೂಡು | 950 | 243013 | 1000 | 255804 | - | - |
| | | ಹೊಳೇನರಸೀಪುರ | - | 629119 | - | 662231 | 2043 | 12750 |
| | | ಆಲೂರು | 1636 | 8075 | 1722 | 8500 | - | - |
| | | ಬೇಲೂರು | 9219 | 180904 | 9704 | 190425 | 3785 | 6000 |
| | | ಸಕಲೇಶಪುರ | - | - | - | - | - | - |
| | | ಒಟ್ಟು | 19542 | 2566470 | 20274 | 1795644 | 16486 | 25250 |
| 7 | ದಕ್ಷಿಣಕನ್ನಡ | ಈ ಜಿಲ್ಲೆಯಲ್ಲಿಯಾವುದೇ ಇಲಾಖೆ ಕೆರೆಗಳು ಇರುವುದಿಲ್ಲ. ಆದ್ದರಿಂದ ಸದರಿಜಿಲ್ಲೆಗೆ ವರದಿ ಶೂನ್ಯವೆಂದು ಪರಿಗಣಿಸುವುದು. | | | | | | |
| 8 | ಗದಗ | ಮುಂಡರಗಿ | 225 | 135700 | 225 | 143936 | - | - |
| | | ಗದಗ | 100 | 35625 | 100 | 406255 | - | - |
| | | ರೋಣ | 200 | 126565 | 200 | 148413 | - | - |
| | | ಶಿರಹಟ್ಟಿ | 200 | 80276 | 200 | 86390 | - | - |
| | | ಒಟ್ಟು | 725 | 378166 | 725 | 784994 | - | - |
| 9 | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | 15000 | 290206 | 19560 | 305479 | 6715 | 66227 |

| ಕ್ರಸಂ | ಜಿಲ್ಲೆ | ರೈತರ ಹೆಸರು ಮತ್ತು ವಿಳಾಸ | ಮರಣದ ದಿನಾಂಕ | ಸರ್ವೇ ನಂ ಮತ್ತು ವಿಸ್ತೀರ್ಣ(ಎ.ಗುಂಟೆ) | ಸಾಲದ ವಿವರ | ಸಮಿತಿಯಲ್ಲಿ ಮಂಡಿಸಿದ ದಿನಾಂಕ | ಸಮಿತಿಯಲ್ಲಿ ಅರ್ಹ ಪ್ರಕರಣವೆಂದು ತೀರ್ಮಾನಿಸಿದ್ದು ಪರಿಹಾರ ವನ್ನು ನೀಡಲಿರುವುದು | ಸಮಿತಿಯಲ್ಲಿ ತಿರಸ್ಕರಿಸಿದ್ದು ಮತ್ತು ತಿರಸ್ಕರಿಸಲು ಕಾರಣಗಳು | ಸಮಿತಿಯಲ್ಲಿ ತೀರ್ಮಾನಿಸಲು ಬಾಕಿ ಇರುವ ಪ್ರಕರಣ | |
|---|---|---|---|---|---|---|---|---|---|---|
| | | | | | | | | | ಎಫ್ ಎಸ್ ಎಲ್ ವರದಿಗಾಗಿ ಮತ್ತು UDR No. | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 63 | ಕಲಬುರಗಿ | ಮಲ್ಲಿಕಾರ್ಜುನ ತಂದೆ ಶರಣಪ್ಪ ಬಂಗಾಲಿ. ಅರ್ಜುಣಗಿ ತಾ ಅಫಜಲಪುರ | 23/08/2018 | ಸ.ನಂ 140/2. 9 ಎ 16 | ರೂ0 .30 ಲಕ್ಷ . ಪಿ ಕೆ ಜಿ ಬಿ ರೇವೂರ | 22/11/2018 | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ | ಪತ್ನಿಯ ಹೆಸರಿನಲ್ಲಿ ಮುದ್ರಾ ಲೋನ್ ಇದೆ |
| 64 | ಕಲಬುರಗಿ | ಅಂಬರಾಯ ತಂ. ಶಿವಮುತ್ತಪ್ಪ ಬಾವಿ ಗ್ರಾ॥ ಕಿಣ್ಣಿಸುಲ್ತಾನ. ಆಳಂದ | 21.06.2018 | ಸ.ನ:103<br>3ಎ .27 ಗು | 1,00,000/- ಪಿ.ಕೆ.ಜಿ.ಬಿ ಆಳಂದ | 22/11/2018 | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ | ಇತರೆ ದಾಖಲಾತಿಗಳ ಸಂಗ್ರಹಣೆ ಪ್ರಗತಿಯಲ್ಲಿದ್ದು ಮಂಡಿಸ ಬೇಕಾಗಿರುತ್ತದೆ |
| 65 | ಕಲಬುರಗಿ | ಹಣಮಂತ ಭೀಮಶಾ. ತಾ ಚಿಂಚೋಳಿ | 18/08/2018 | ದಾಖಲಾತಿ ನಿಡಿರುವುದಿಲ್ಲ | ದಾಖಲಾತಿ ನಿಡಿರುವುದಿಲ್ಲ | - | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ | ದಾಖಲಾತಿ ನಿಡಿರುವುದಿಲ್ಲ | ಇತರೆ ದಾಖಲಾತಿಗಳ ಸಂಗ್ರಹಣೆ ಪ್ರಗತಿಯಲ್ಲಿದ್ದು ಮಂಡಿಸ ಬೇಕಾಗಿರುತ್ತದೆ |
| 66 | ಕಲಬುರಗಿ | **ಉಮೆಶ ತಂದೆ ಶ್ರಿರಾಮ ಜಾದವ**,ತಾ ಚಿತ್ತಾಪುರ | 12/09/2018 | 391/392<br>2.00/2.00 | ಕೆ ಜಿ ಬಿ ರಟಕಲ<br>1 ಲಕ್ಷ | - | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ | ಇಬ್ಬರು ಹೆಂಡತಿಯರಿದ್ದು . ವಂಶಾವಳಿ ಬೇಕಾಗಿರುತ್ತದೆ |
| 67 | ಕಲಬುರಗಿ | ಯಲ್ಲಾಲಿಂಗ ತಂ.ಶರಣಪ್ಪ ತಾ ಕಲಬುರಗಿ | 13.06.2018 | ಸ .ನಂ 12/3. 1 ಎ 14 ಗು ತಂದೆಯ ಹೆಸರಿನಲ್ಲಿ ಇದ | ಸಾಲ ಇರುವುದಿಲ್ಲ | 26/07/2018 | ಅನ್ವಯಿಸುವುದಿಲ್ಲ | 30-06-2018 ರಂದು ಜಂ.ಕೃ.ನಿ ಕಛೇರಿಗೆ ವರದಿ ಬಂದಿರುತ್ತದೆ ಸದರಿಯವರ ಹೆಸರಿನಲ್ಲಿ ಹೊಲ ಇರುವುದಿಲ್ಲ , ಸಾಲ ಇಲ್ಲ | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ |
| 68 | ಕಲಬುರಗಿ | ಬಾಬು ತಂದೆ ಮರೆಪ್ಪಾ ತಾ ಕಲಬುರಗಿ | 12/11/2018 | ಸ.ನಂ. 90/2 3.20 ಎ ತಂದೆಯ ಹೆಸರಿನಲ್ಲಿ ಇದೆ | 1.40 ಲಕ್ಷ ವಿಜಯ ಬ್ಯಾಂಕ ಫರಹತಾಬಾದ | - | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ | ಇತರೆ ದಾಖಲಾತಿಗಳ ಸಂಗ್ರಹಣೆ ಪ್ರಗತಿಯಲ್ಲಿದ್ದು ಮಂಡಿಸ ಬೇಕಾಗಿರುತ್ತದೆ |
| 69 | ಕಲಬುರಗಿ | ಗುಂಡಪ್ಪ ತಂದೆ ಬಸಣ್ಣ ಮಾಲಿ ತಾ ಜೇವರ್ಗಿ | 02/10/2018 | ಸ.ನಂ 27 2 ಎ 35 ಮತ್ತ ಸ ನಂ. 17/1 2 ಎಕರೆ 19ಗು | ಎಚ್ ಡಿ ಎಫ್ ಸಿ ಕಲಬುರಗಿ 8.46 ಲಕ್ಷ | 20-11-2018 ಮಂಡಸಲಾಗಿದ್ದು , ದಾಖಲಾತಿ ಸಂಗ್ರಹಿಸಿದ್ದು ,ಮರು ಮಂಡಿಸ ಬೇಕಾಗಿದೆ | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ | ಪೋಸ್ಟ ಮರ್ಟಮ್ ರಿಪೋರ್ಟ, ಬ್ಯಾಂಕ ಸ್ಟೆಟ ಮೆಂಟ್ ಇರುವುದಿಲ್ಲ |

| ಕ್ರಸಂ | ಜಿಲ್ಲೆ | ರೈತರ ಹೆಸರು ಮತ್ತು ವಿಳಾಸ | ಮರಣದ ದಿನಾಂಕ | ಸರ್ವೇ ನಂ ಮತ್ತು ವಿಸ್ತೀರ್ಣ(ಎ.ಗುಂಟೆ) | ಸಾಲದ ವಿವರ | ಸಮಿತಿಯಲ್ಲಿ ಮಂಡಿಸಿದ ದಿನಾಂಕ | ಸಮಿತಿಯಲ್ಲಿ ಅರ್ಹ ಪ್ರಕರಣವೆಂದು ತೀರ್ಮಾನಿಸಿದ್ದು ಪರಿಹಾರ ವನ್ನು ನೀಡದಿರುವುದು | ಸಮಿತಿಯಲ್ಲಿ ತಿರಸ್ಕರಿಸಿದ್ದು ಮತ್ತು ತಿರಸ್ಕರಿಸಲು ಕಾರಣಗಳು | ಸಮಿತಿಯಲ್ಲಿ ತೀರ್ಮಾನಿಸಲು ಬಾಕಿ ಇರುವ ಪ್ರಕರಣ | |
|---|---|---|---|---|---|---|---|---|---|---|
| | | | | | | | | | ಎಫ್ ಎಸ್ ಎಲ್ ವರದಿಗಾಗಿ ಮತ್ತು UDR No. | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 70 | ಕಲಬುರಗಿ | ಮಹಿಬೂಬ ಸಾಬ ತಂದೆ ದವಲಸಾ ಬ ಇನಾಮದಾರ, ನಾರಾಯಣಪೂರ ತಾ ಜೇವರ್ಗಿ | 20/09/2018 | ಸ.ನಂ 55/4, ૩ ಎ | ಪಿ ಕೆ ಜಿ ಬಿ ಅಂಕಲಗಾ 1.8 ಲಕ್ಷ | 20-11-2018 ಮಂಡಿಸಲಾಗಿದ್ದು , ದಾಖಲಾತಿ ಸಂಗ್ರಹಿಸಿದ್ದು ,ಮರು ಮಂಡಿಸ ಬೇಕಾಗಿದೆ | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ | ಅನ್ವಯಿಸುವುದಿಲ್ಲ | ಪಹಣಿ, ವಂಶಾವಳ ಇರುವುದಿಲ್ಲ |
| 71 | ಕೊಡಗು | ಮಚ್ಚುರ ಎನ್. ಮಂದಣ್ಣ, ಬಿನ್ ಲೇಟ್ ನಂಜುಂಡ, ಪೇರೂರು ಗ್ರಾಮ, ಬಲ್ಲಮಾವಟಿ ಪಂಚಾಯ್ತಿ, | 12.06.2018 | 5 ಎಕರೆ ಕಾಫಿ, 1.5 ಎಕರೆ ಭತ್ತ | ಡಿ.ಸಿ.ಸಿ ಬ್ಯಾಂಕ್ ನಾಪೋಕ್ಲು ಕೃಷಿ ಪ್ರಾ.ಕೃ.ಪ.ಸ.ಸಂಘ, ನೆಲಜಿ ಬೆಳೆ ಸಾಲ ಸಾಲ | 1.14 2 | ದಿನಾಂಕ: 10.07.2018 ರಂದು ಮಂಡಿಸಲಾಗಿದೆ. | — | — | |
| 72 | ಕೊಡಗು | ಬಿ.ಪಿ. ಕುಶಾಲಪ್ಪ ತಲ್ತರೆ ಶೆಟ್ಟಳ್ಳಿ ಗ್ರಾಮ, ಶಾಂತಳ್ಳಿ ಹೋಬಳಿ, ಸೋಮವಾರಪೇಟೆ ತಾಲ್ಲೂಕು | 24/9/2018 | 2.2 ಎಕರೆ ಕಾಫಿ | ಡಿ.ಸಿ.ಸಿ ಬ್ಯಾಂಕ್ ಸೋಮವಾರಪೇಟ ಪ್ರಾ.ಕೃ.ಪ.ಸ.ಸಂ.ನಿ. ಶಾಂತಳ್ಳಿ | 12.07 3 | ಪ್ರಕರಣವನ್ನು ಸಭೆಗೆ ಮಂಡಿಸಿರುವುದಿಲ್ಲ | - | - | |
| 73 | ಕೊಡಗು | ಬೊಮ್ಮಯ್ಯ, ಸೀಗೆಹೊಸೂರು ಗ್ರಾಮ, ಕುಶಾಲನಗರ ಹೋಬಳಿ, ಸೋಮವಾರಪೇಟೆ ತಾಲ್ಲೂಕು | 17/10/2018 | 1.27 ಎಕರೆ ಮುಸುಕಿನ ಜೋಳ | ಕೆನರಾ ಬ್ಯಾಂಕ್ ಕೂಡಿಗೆ ಪ್ರಾ.ಕೃ.ಪ.ಸ.ಸಂ.ನಿ. ಶಾಂತಳ್ಳಿ | 0.77 0.31 | ಪ್ರಕರಣವನ್ನು ಸಭೆಗೆ ಮಂಡಿಸಿರುವುದಿಲ್ಲ | - | - | |
| 74 | ಕೋಲಾರ | - | - | - | - | - | - | - | - | - |
| 75 | ಕೊಪ್ಪಳ | ವೀರುಪಾಕ್ಷಪ್ಪ ತಂದೆ ಲಕ್ಷ್ಮಣ ಮುದ್ದಾಬಳ್ಳಿ ಸಾ: ಚಂಡಿನಾಳ, ಹೊಬಳಿ: ಮಂಗಳೂರು | 12-09-2018 | 8.2 | ರೂ.69000 ಮೃತನ ತಂದೆ ಹೆಸರಿನಲ್ಲಿದೆ | - | - | - | 17/2018-19, ದಿ:12-09-2018 ಕಲಂ 174 ಸಿಆರ್‌ಪಿಸಿ | ಮೃತನಿಗೆ ಇಬ್ಬರು ಪತ್ನಿಯರಿರುವ ಕಾರಣ ಪ್ರಕರಣ ಬಾಕಿ ಇರುತ್ತದೆ. |
| 76 | ಕೊಪ್ಪಳ | ಶರಣಪ್ಪ ಅಂದಾನಪ್ಪ ಪೋ.ಪಾಟೀಲ್ ಸಾ.ನಿಲೋಗಲ್ | 28-11-2018 | 4.23 | ಎಸ್.ಬಿ.ಐ ಕೊಪ್ಪಳದಲ್ಲಿ ರೂ.400000/- ಸಾಲ | - | - | - | 0222018/29-11-2018 | ದಾಖಲಾತಿ ಸಂಗ್ರಹಣೆ |
| 77 | ಮಂಡ್ಯ | ಮಹದೇವ ಬಿನ್ ಪಿ. ಮಾದೇಗೌಡ, ಹೆಮ್ಮಿಗೆ, ಕೊತ್ತತ್ತಿ ಹೋಬಳಿ, ಮಂಡ್ಯ ತಾಲ್ಲೂಕು | 07.09.2018 | 1 ಎಕರೆ 7 ಗುಂಟೆ | ರೂ. 40000/- ವಿಜಯಾ ಬ್ಯಾಂಕ್, ಬೂದನೂರು (ಮೃತರ ತಾಯಿ ಹೆಸರಿನಲ್ಲಿ) | 22.11.2018 | - | - | - | ಸಾಲದ ದಾಖಲಾತಿಗಳು ಸಲ್ಲಿಸಿಲ್ಲ |
| 78 | ಮಂಡ್ಯ | ಕುಮಾರ ಬಿನ್ ನಿಂಗೇಗೌಡ, ಕೆ.ಶೆಟ್ಟಹಳ್ಳಿ, ಸಿ.ಎ.ಕೆರೆ ಹೋಬಳಿ, ಮದ್ದೂರು ತಾಲ್ಲೂಕು | 13.06.2018 | 15 ಗುಂಟೆ (ಮೃತರ ತಂದೆ ಹೆಸರಿನಲ್ಲಿದೆ) | ರೂ. 59000/- ಪಿ.ಎ.ಸಿ.ಎಸ್.ಶೆಟ್ಟಹಳ್ಳಿ (ತಂದೆ ಹೆಸರಿನಲ್ಲಿದೆ) | 22.11.2018 | - | ತಿರಸ್ಕರಿಸಲಾಗಿದೆ. ಸಾಲವನ್ನು ಮೃತರ ತಂದೆಯವರು ಫೆಬ್ರವರಿ-2018ರಲ್ಲಿ ಪಡೆದಿದ್ದು, ಸದರಿ ಸಾಲದ ಮರುಪಾವತಿ ಅವಧಿಯು | - | - |
| 79 | ಮಂಡ್ಯ | ಎಂ.ಸಿ.ರಾಜೇಗೌಡ ಬಿನ್ ಲೇ. ಚಿಕ್ಕೇಗೌಡ, ಮೂಡ್ಯ, ಕೊಪ್ಪ ಹೋಬಳಿ, ಮದ್ದೂರು ತಾಲ್ಲೂಕು | 30.08.2018 | 2 ಎಕರೆ 8 ಗುಂಟೆ | ಒಟ್ಟು ರೂ. 179000/- ಮಹಾರಾಜಾ ಬ್ಯಾಂಕರ್ಸ್, ರಾಜಕಮಲ್ ಬ್ಯಾಂಕರ್ಸ್, ಮತ್ತು ಸ್ವಸಹಾಯ ಸಂಘ | 22.11.2018 | - | - | ಎಫ್ ಎಸ್ ಎಲ್ ವರದಿಗಾಗಿ, UDR No. 13/2018 | - |
| 80 | ಮಂಡ್ಯ | ವೆಂಕಟರಾಮು ಬಿನ್ ಲೇಟ್ ವೆಂಕಟಪ್ಪ, ಕೌಡ್ಲೆ, ಕೊಪ್ಪ ಹೋಬಳಿ, ಮದ್ದೂರು ತಾಲ್ಲೂಕು | 12.09.2018 | 1 ಎಕರೆ | ರೂ. 84000/- ವಿಜಯಾ ಬ್ಯಾಂಕರ್ಸ್, ಕೊಪ್ಪ, ರಾಜಶ್ರೀ ಬ್ಯಾಂಕರ್ಸ್, ಕೊಪ್ಪ | 22.11.2018 | - | - | ಎಫ್ ಎಸ್ ಎಲ್ ವರದಿಗಾಗಿ, UDR No. 15/2018 | - |
| 81 | ಮಂಡ್ಯ | ಗೂಳಿಗೌಡ ಬಿನ್ ಕರಿಗೌಡ, ಡಿ.ಹೊಸಹಳ್ಳಿ, ಕೊಪ್ಪ ಹೋಬಳಿ, ಮದ್ದೂರು ತಾಲ್ಲೂಕು | 16.09.2018 | 1 ಎಕರೆ 18 ಗುಂಟೆ | ರೂ. 101000/- ವಿಜಯಾ ಬ್ಯಾಂಕ್ ಕೊಪ್ಪ, ರಾಜಕಮಲ್ ಬ್ಯಾಂಕರ್ಸ್, SKDRDP koppa | 22.11.2018 | - | - | ಎಫ್ ಎಸ್ ಎಲ್ ವರದಿಗಾಗಿ, UDR No. 17/2019 | - |
| 82 | ಮಂಡ್ಯ | ರಾಮಮೂರ್ತಿ ಬಿನ್ ಆಂಜನೇಯ, ತಳಗವಾದಿ, ಕಿರುಗಾವಲು, ಮಳವಳ್ಳಿ ತಾಲ್ಲೂಕು | 03.08.2018 | 1 ಎಕರೆ 15 ಗುಂಟೆ | ರೂ. 20000/- ಪಿ.ಎ.ಸಿ.ಎಸ್. ತಳಗವಾದಿ | 22.11.2018 | - | ತಿರಸ್ಕರಿಸಲಾಗಿದೆ. ಮೃತರಿಗೆ 26 ವರ್ಷ ವಯಸ್ಸಾಗಿತ್ತು, ಅವಿವಾಹಿತರಾಗಿದ್ದರು. ಕುಟುಂಬದ ನಿರ್ವಹಣೆಯನ್ನು ಮೃತರ | - | - |
| 83 | ಮಂಡ್ಯ | ರಮೇಶ ಬಿನ್ ಪುಟ್ಟೇಗೌಡ, ತಡಗವಾಡಿ, ಶ್ರೀರಂಗಪಟ್ಟಣ ತಾಲ್ಲೂಕು | 21.07.2018 | 145/ಪಪ್ಪೈ ಪಿ3, 2 ಎಕರೆ | ರೂ. 20000/- ಪಿ.ಎ.ಸಿ.ಎಸ್. ತಡಗವಾಡಿ, ರೂ. 39259/- ಎಸ್.ಬಿ.ಐ. ಕೊಡಿಯಾಲ | 28.11.2018 | ದಿನಾಂಕ 28.11.2018ರಂದು ನಡೆದ ಉಪವಿಭಾಗ ಮಟ್ಟದ ಸಮಿತಿ ಸಭೆಯಲ್ಲಿ ಪರಿಹಾರ ವಿತರಣೆಗೆ ಅರ್ಹ ಪ್ರಕರಣ | - | - | - |

| ಕ್ರಸಂ | ಜಿಲ್ಲೆ | ರೈತರ ಹೆಸರು ಮತ್ತು ವಿಳಾಸ | ಮರಣದ ದಿನಾಂಕ | ಸರ್ವೆ ನಂ ಮತ್ತು ವಿಸ್ತೀರ್ಣ (ಎ.ಗುಂಟೆ) | ಸಾಲದ ವಿವರ | ಸಮಿತಿಯಲ್ಲಿ ಮಂಡಿಸಿದ ದಿನಾಂಕ | ಸಮಿತಿಯಲ್ಲಿ ಅರ್ಹ ಪ್ರಕರಣವೆಂದು ತೀರ್ಮಾನಿಸಿದ್ದು ಪರಿಹಾರ ವನ್ನು ನೀಡಬೇಕಾದುದು | ಸಮಿತಿಯಲ್ಲಿ ತಿರಸ್ಕರಿಸಿದ್ದು ಮತ್ತು ತಿರಸ್ಕರಿಸಲು ಕಾರಣಗಳು | ಸಮಿತಿಯಲ್ಲಿ ತೀರ್ಮಾನಿಸಲು ಬಾಕಿ ಇರುವ ಪ್ರಕರಣ | |
|---|---|---|---|---|---|---|---|---|---|---|
| | | | | | | | | | ಎಫ್ ಎಸ್ ಎಲ್ ವರದಿಗಾಗಿ ಮತ್ತು UDR No. | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 84 | ಮಂಡ್ಯ | ಪುಟ್ಟಸ್ವಾಮಿಗೌಡ ಬಿನ್ ಚಿಕ್ಕಪುಟ್ಟಗೌಡ, ಬಳೇಬೀಡು, ಮೇಲುಕೋಟೆ ಹೋಬಳಿ, ಪಾಂಡವಪುರ ತಾಲ್ಲೂಕು | 09.07.2018 | 1 ಎಕರೆ 4 ಗುಂಟೆ | ರೂ. 55000/- ಪಿ.ಎ.ಸಿ.ಎಸ್- ಹಳೇಬೀಡು | 28.11.2018 | ದಿನಾಂಕ 28.11.2018ರಂದು ನಡೆದ ಉಪವಿಭಾಗ ಮಟ್ಟದ ಸಮಿತಿ ಸಭೆಯಲ್ಲಿ ಪರಿಹಾರ ವಿತರಣೆಗೆ ಅರ್ಹ ಪ್ರಕರಣ | - | - | - |
| 85 | ಮಂಡ್ಯ | ಶ್ರೀನಿವಾಸ್ ಬಿನ್ ಜವರೇಗೌಡ, ಚಿಕ್ಕಾಡೆ, ಕಸಬಾ ಹೋಬಳಿ, ಪಾಂಡವಪುರ ತಾಲ್ಲೂಕು | 30.07.2018 | 27 ಗುಂಟೆ (ಮೃತರ ತಾಯಿ ಹೆಸರಿನಲ್ಲಿ) | ರೂ. 30000/- ಪಿ.ಎ.ಸಿ.ಎಸ್-ಚಿಕ್ಕಾಡೆ- (ಮೃತರ ತಾಯಿ ಹೆಸರಿನಲ್ಲಿ), ರೂ. 150000/- ವಿಜಯಾ ಬ್ಯಾಂಕ್-ಚಿಕ್ಕಾಡೆ- ಒಡವೆ ಸಾಲ . | 28.11.2018 | ದಿನಾಂಕ 28.11.2018ರಂದು ನಡೆದ ಉಪವಿಭಾಗ ಮಟ್ಟದ ಸಮಿತಿ ಸಭೆಯಲ್ಲಿ ಪರಿಹಾರ ವಿತರಣೆಗೆ ಅರ್ಹ ಪ್ರಕರಣ | - | - | - |

| ಕ್ರಸಂ | ಜಿಲ್ಲೆ | ರೈತರ ಹೆಸರು ಮತ್ತು ವಿಳಾಸ | ಮರಣದ ದಿನಾಂಕ | ಸರ್ವೆ ನಂ ಮತ್ತು ವಿಸ್ತೀರ್ಣ(ಎ.ಗುಂಟೆ) | ' ಸಾಲದ ವಿವರ | ಸಮಿತಿಯಲ್ಲಿ ಮಂಡಿಸಿದ ದಿನಾಂಕ | ಸಮಿತಿಯಲ್ಲಿ ಅರ್ಹ ಪ್ರಕರಣವೆಂದು ತೀರ್ಮಾನಿಸಿದ್ದು ಪರಿಹಾರ ವನ್ನು ನೀಡದಿರುವುದು | ಸಮಿತಿಯಲ್ಲಿ ತಿರಸ್ಕರಿಸಿದ್ದು ಮತ್ತು ತಿರಸ್ಕರಿಸಲು ಕಾರಣಗಳು | ಸಮಿತಿಯಲ್ಲಿ ತೀರ್ಮಾನಿಸಲು ಬಾಕಿ ಇರುವ ಪ್ರಕರಣ | |
|---|---|---|---|---|---|---|---|---|---|---|
| | | | | | | | | | ಎಫ್ ಎಸ್ ಎಲ್ ವರದಿಗಾಗಿ ಮತ್ತು UDR No. | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 86 | ಮಂಡ್ಯ | ವೆಂಕಟೇಶ ಬಿನ್ ವೆಂಕಟ @ ತಪ್ಪಲಿ. ಮೇಲುಕೋಟೆ. ಪಾಂಡವಪುರ ತಾಲ್ಲೂಕು | 09.08.2018 | 17 ಗುಂಟೆ | ಸ್ವಸಹಾಯ ಸಂಘ ರೂ. 1.21 ಲಕ್ಷ (ಮೃತರ ಪತ್ನಿ ಹೆಸರಿನಲ್ಲಿ) | 28.11.2018 | - | ತಿರಸ್ಕರಿಸಲಾಗಿದೆ. ಮೃತರ ಹೆಸರಿನಲ್ಲಿ ಯಾವುದೇ ಬ್ಯಾಂಕ್ ಅಥವಾ ಸಾಂಸ್ಥಿಕ ಸಂಸ್ಥೆಯಿಂದ ಸಾಲ ಪಡೆದಿರುವುದಿಲ್ಲದ ಕಾರಣ | - | - |
| 87 | ಮಂಡ್ಯ | ಚಂದ್ರಶೇಖರ.ಎಸ್.ಕೆ. ಬಿನ್ ಕುಳ್ಳೇಗೌಡ. ಸುಂಕಾತೊಣ್ಣೂರು. ಮೇಲುಕೋಟೆ ಹೋಬಳಿ. ಪಾಂಡವಪುರ ತಾಲ್ಲೂಕು | 21.10.2018 | 11 ಗುಂಟೆ (ಮೃತರ ತಾತನ ಹೆಸರಿನಲ್ಲಿದೆ) | ಚಿನ್ನದ ಸಾಲ ರೂ. 8000/- (ಖಾಸಗಿ ಬ್ಯಾಂಕರ್ಸ್). ಕೈಸಾಲ | 28.11.2018 | - | ತಿರಸ್ಕರಿಸಲಾಗಿದೆ. ಮೃತರ ಹೆಸರಿನಲ್ಲಿ ಯಾವುದೇ ಜಮೀನು ಇರುವುದಿಲ್ಲ. ಮೃತರ ಯಾವುದೇ ಬ್ಯಾಂಕ್ ಅಥವಾ ಸಾಂಸ್ಥಿಕ | - | - |
| 88 | ರಾಮನಗರ | ಶಿವರಾಜು ಬಿನ್ ಲೇ॥ ವೆಂಕಟಪ್ಪ. ಸುಂಟರದೊಡ್ಡಿ. ಮರಳವಾಡಿ ಹೋಬಳಿ. ಕನಕಪುರ ತಾಲ್ಲೂಕು | 16.06.2018 | 83/2 | 0.25 | ಮಾಹಿತಿ ಸಂಗ್ರಹಣೆ ಕಾರ್ಯ ಪ್ರಗತಿಯಲ್ಲಿದೆ | 03.10.2018 ಮಂಡಿಸಲಾಗಿದೆ | ತಿರಸ್ಕರಿಸಲಾಗಿದೆ | ಸಾಲದ ಬಗ್ಗೆ ಅಧಿಕೃತ ದಾಖಲಾತಿಗಳು ಲಭ್ಯವಿಲ್ಲದ ಪ್ರಯುಕ್ತ | - |
| 89 | ರಾಮನಗರ | ಹೆಚ್.ಟಿ.ಶ್ರೀನಿವಾಸ್ ಬಿನ್ ತಿಮ್ಮೇಗೌಡ. ಹೂಕುಂದ. ಉಯ್ಯಂಬಳ್ಳಿ ಹೋಬಳಿ. ಕನಕಪುರ ತಾಲ್ಲೂಕು | 23.08.2018 | 290/1 229 (ತಾಯಿ ಹೆಸರಿನಲ್ಲಿ) | 2.3 1.22 | ಹೆಚ್.ಡಿ.ಎಫ್.ಸಿ.ಬ್ಯಾಂಕ್. ಕನಕಪುರ 2.30 ಲಕ್ಷ ಕೈಸಾಲ 10.00 ಲಕ್ಷ | 28.11.2018 ಮಂಡಿಸಲಾಗಿದೆ | ದಾಖಲಾತಿಗಳ ಕೊರತೆಯಿಂದ ತೀರ್ಮಾನ ಕಾಯ್ದಿರಿಸಲಾಗಿದೆ | - | - |
| 90 | ರಾಮನಗರ | ನಂಜೇಗೌಡ ಉ॥ ಸಣ್ಣಪ್ಪ ಬಿನ್ ಪಿಪಿಗೌಡ. ಚನ್ನಸಂದ್ರ. ಉಯ್ಯಂಬಳ್ಳಿ ಹೋಬಳಿ. ಕನಕಪುರ ತಾಲ್ಲೂಕು | 07.10.2018 | 119-2.06 ಎಕರೆ 74-2.14ಎಕರೆ | 119-2.06 ಎಕರೆ 74-2.14ಎಕರೆ | ಕೈಸಾಲ ಮತ್ತು ಯುಕೋ ಬ್ಯಾಂಕ್. ರೂ.680000 | 28.11.2018 ಮಂಡಿಸಲಾಗಿದೆ | ದಾಖಲಾತಿಗಳ ಕೊರತೆಯಿಂದ ತೀರ್ಮಾನ ಕಾಯ್ದಿರಿಸಲಾಗಿದೆ | - | - |
| 91 | ರಾಮನಗರ | ಗಣೇಶ ಬಿನ್ ರಾಮಯ್ಯ. ಟೋಕಿನಾಯ್ಕನದೊಡ್ಡಿ. ಉಯ್ಯಂಬಳ್ಳಿ ಹೋಬಳಿ. ಕನಕಪುರ ತಾಲ್ಲೂಕು | 11.10.2018 | 102-4.00 (ತಂದೆ ಹೆಸರಿನಲ್ಲಿ ಜಂಟಿ ) | 102-4.00 (ತಂದೆ ಹೆಸರಿನಲ್ಲಿ ಜಂಟಿ ) | ಪಿ.ಎಲ್.ಡಿ ಬ್ಯಾಂಕ್. ಒಡವೆ ಸಾಲ. ಹಸುವಿನ ಸಾಲ. ಸಂಘ. ಉಳಿತಾಯ | 28.11.2018 ಮಂಡಿಸಲಾಗಿದೆ | ದಾಖಲಾತಿಗಳ ಕೊರತೆಯಿಂದ ತೀರ್ಮಾನ ಕಾಯ್ದಿರಿಸಲಾಗಿದೆ | - | - |
| 92 | ರಾಮನಗರ | ರಾಜು ಬಿನ್ ಚಿಕ್ಕಮರಿಯಪ್ಪ. ಲಿಂಗೇಗೌಡನದೊಡ್ಡಿ. ಕಸಬಾ ಹೋಬಳಿ. ರಾಮನಗರ ತಾಲ್ಲೂಕು | 21.11.2018 | 41/2 40 | 0.10 ಗುಂಟೆ. 1.20 ಗುಂಟೆ | ಪತ್ನಿ ಹೆಸರಿನಲ್ಲಿ ಕೆನರಾ ಬ್ಯಾಂಕ್ ಸುಗ್ಗನಹಳ್ಳಿ ಮತ್ತು ಸ್ತ್ರೀಶಕ್ತಿ ಸಂಘಗಳಲ್ಲಿ ಸಾಲ | ಮಂಡಿಸಬೇಕಾಗಿದೆ | ದಾಖಲಾತಿಗಳ ಸಂಗ್ರಹಣೆ ಕಾರ್ಯ ಪ್ರಗತಿಯಲ್ಲಿದೆ | - | - |
| 93 | ಶಿವಮೊಗ್ಗ | ಶಂಕರನಾಯ್ಕ ಬಿನ್ ಲೋಕ್ಯಾ ನಾಯ್ಕ. ಹಾರೋಬೆನವಳ್ಳಿ. ಬಿ. ಬೀರನಹಳ್ಳಿ ಹೋಬಳಿ. ಶಿವಮೊಗ್ಗ ತಾ: | 11.08.2018 | 3.22 | ಯಾವುದೇ ಸಾಲ ಇರುವುದಿಲ್ಲ | 20.11.2018 | | ರೈತರು ಸಾಲಬಾಧೆಯಿಂದ ಮೃತರಾಗಿರುವುದಿಲ್ಲ | | |
| 94 | ಶಿವಮೊಗ್ಗ | ಸುನೀಲ್ ಬಿನ್ ಭೀಮಪ್ಪ ಕೊಡ್ಲೇರ. ಮೂಡಿದೊಡ್ಡಿಕೊಪ್ಪ. ಆನವಟ್ಟಿ ಹೋಬಳಿ. ಸೊರಬ ತಾ: | 18.08.2018 | 7.25 ತಂದೆ ಹೆಸರಿನಲ್ಲಿ | ಯಾವುದೇ ಸಾಲ ಇರುವುದಿಲ್ಲ | 06.09.2018 | | ರೈತರು ಸಾಲಬಾಧೆಯಿಂದ ಮೃತರಾಗಿರುವುದಿಲ್ಲ | | |
| 95 | ಶಿವಮೊಗ್ಗ | ದುರ್ಗಪ್ಪ ಬಿನ್ ಚೌಡಪ್ಪ. ಓಲಗೋಡು ಗ್ರಾಮ. ಹೊಸನಗರ ತಾ: | 16.09.2018 | 1.05+ 3.00 ಬಗರ್ ಹುಕುಂ | ಪಿ ಕೆ ಜಿ ಬಿ ಪುರಪ್ಪೆಮನೆ ರೂ.1.25 + ಕೆನರಾ ಬ್ಯಾಂಕ್ ಬಟ್ಟೆಮಲ್ಲಪ್ಪ ರೂ.0.30 ಲಕ್ಷ+ ಧರ್ಮಸ್ಥಳ ಸಂಘ ರೂ.0.50ಲಕ್ಷ+ಸ್ವಸಹಾಯ ಸಂಘ ರೂ. 0.50 ಲಕ್ಷ | . | | | 21/2018 | |
| 96 | ಶಿವಮೊಗ್ಗ | ಯು ಎ ಶ್ರೀನಿವಾಸ ಗೌಡ ಬಿನ್ ಅಣ್ಣಪ್ಪ ಗೌಡ. ಬಾಳೆಹಳ್ಳಿ ಗ್ರಾಮ. ಉಳುಮಡಿ. ಹೊಸಗದ್ದೆ ಅಂಚೆ. ಆಗುಂಬೆ ಹೋಬಳಿ ತೀರ್ಥಹಳ್ಳಿ ತಾ: | 02.10.2018 | 2.33 | ಸಿಂಡಿಕೇಟ್ ಬ್ಯಾಂಕ್. ಆಗುಂಬೆ ರೂ.1.20 ಲಕ್ಷ+ ಸಹ್ಯಾದ್ರಿ ಸೊಸೈಟಿ ರೂ.0.30ಲಕ್ಷ+ಕರ್ನಾಟಕ ಬ್ಯಾಂಕ್ ರೂ.0.30 ಲಕ್ಷ+ ಪಾಪ್ ಸೊಸೈಟಿ ಯೊನ್ನೇತಾಳು ರೂ. 0.44 ಲಕ್ಷ | 29.11.2018 | | | | |
| 97 | ಉಡುಪಿ | - | - | - | - | - | - | - | - | - |

| ಕ್ರಸಂ | ಜಿಲ್ಲೆ | ರೈತರ ಹೆಸರು ಮತ್ತು ವಿಳಾಸ | ಮರಣದ ದಿನಾಂಕ | ಸರ್ವೆ ನಂ ಮತ್ತು ವಿಸ್ತೀರ್ಣ(ಎ.ಗುಂಟೆ) | ಸಾಲದ ವಿವರ | ಸಮಿತಿಯಲ್ಲಿ ಮಂಡಿಸಿದ ದಿನಾಂಕ | ಸಮಿತಿಯಲ್ಲಿ ಅರ್ಹ ಪ್ರಕರಣವೆಂದು ತೀರ್ಮಾನಿಸಿದ್ದು ಪರಿಹಾರ ವನ್ನು ನೀಡದಿರುವುದು | ಸಮಿತಿಯಲ್ಲಿ ತಿರಸ್ಕರಿಸಿದ್ದು ಮತ್ತು ತಿರಸ್ಕರಿಸಲು ಕಾರಣಗಳು | ಸಮಿತಿಯಲ್ಲಿ ತೀರ್ಮಾನಿಸಲು ಬಾಕಿ ಇರುವ ಪ್ರಕರಣ | |
|---|---|---|---|---|---|---|---|---|---|---|
| | | | | | | | | | ಎಫ್ ಎಸ್ ಎಲ್ ವರದಿಗಾಗಿ ಮತ್ತು UDR No. | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 98 | ಉತ್ತರಕನ್ನಡ | ಅಶೋಕ ಟ ಭಜಂತ್ರಿ,ಕೋಡಂಬಿ, ಮುಂಡಗೋಡ | 13.07.2018 | - | 1.00 ಲಕ್ಷ ಬೆಳೆ ಸಾಲ ಮತ್ತು 7.00 ಲಕ್ಷ ಟ್ರಾಕ್ಟರ್ ಸಾಲ | - | - | ಹೌದು | - | - |
| 99 | ಉತ್ತರಕನ್ನಡ | ಚಂದ್ರಶೇಖರ ನಾರಾಯಣ ಭಟ,ಡಾಯಿಮನೆ,ಜಾನ್ಮನೆ,ಶಿರಸಿ | 17.09.2018 | 3.2 ಎಕರೆ | 2.77 ಲಕ್ಷ ಬೆಳೆ ಸಾಲ | - | - | - | - | ಹೌದು |
| 100 | ವಿಜಯಪುರ | ಶ್ರೀ ಶಿವಪ್ಪ ಸಾಬಣ್ಣ ಉಕ್ಕಲಿ<br>ಸಾ: ಹಳ್ಳೂರ ತಾ: ಮುದ್ದೇಬಿಹಾಳ | 26/6/18 | 3.14 | ಸಿಂಡಿಕೇಟ ಬ್ಯಾಂಕ ಢವಳಗಿ 50000/- | 18/07/2018 | ಪರಿಹಾರ ವಿತರಿಸಬೇಕಾಗಿದೆ. | - | - | - |
| 101 | ವಿಜಯಪುರ | ಶ್ರೀ ಮಲಕಪ್ಪ ಶರಣಪ್ಪ ಹೊಸಮನಿ<br>ಸಾ: ಕುರುಬತಳ್ಳಿ ತಾ: ಸಿಂದಗಿ | 14/7/18 | 2.04 | ಬ್ಯಾಂಕ್ ಆಫ್ ಬರೋಡಾ ಆಲಮೇಲ್ 300000/-<br>ಕೈಗಡ ಸಾಲ 300000/- | 28/07/2018 | ಪರಿಹಾರ ವಿತರಿಸಬೇಕಾಗಿದೆ. | - | - | - |
| 102 | ವಿಜಯಪುರ | ಶ್ರೀ ಸಕರಪ್ಪ ಶಿವಪ್ಪ ವಾಲಿಕಾರ<br>ಸಾ: ವನಹಳ್ಳಿ ತಾ: ಮುದ್ದೇಬಿಹಾಳ | 27/7/18 | 5.04 | ಕೆವಿಜಿ ಬ್ಯಾಂಕ ಮಿಣಜಗಿ 154000/- | 10/11/2018 | ಪರಿಹಾರ ವಿತರಿಸಬೇಕಾಗಿದೆ. | - | - | - |
| 103 | ವಿಜಯಪುರ | ಶ್ರೀ ಪ್ರಕಾರ ಗುರಲಿಂಗಪ್ಪ ತೇಲಿ<br>ಸಾ: ನಿವರಗಿ ತಾ: ಇಂಡಿ | 08/03/2018 | 8.00 | ಪಿಕೆಪಿಎಸ್ ಚಡಚಣ 75000/-<br>ಕೆವಿಜಿಬಿ ಚಡಚಣ 400000/-<br>ಕೈಗಡ ಸಾಲ 450000/- | 29/08/2018 | ಪರಿಹಾರ ವಿತರಿಸಬೇಕಾಗಿದೆ. | - | - | - |
| 104 | ವಿಜಯಪುರ | ಶ್ರೀ ವಿಠ್ಠಲಗೌಡ ಕಲ್ಲನಗೌಡ ಪಾಟೀಲ<br>ಸಾ: ಗೊರವಗುಂಡಗಿ ತಾ: ಸಿಂದಗಿ | 27/8/2018 | 8.19 | ಎಸ.ಬಿ.ಐ ಸಿಂದಗಿ **250000/-**<br>ಪಿಕೆಪಿಎಸ್ 50000/- | 20/09/2018 | - | - | ಎಫ್.ಎಸ್.ಎಲ್ ವರದಿಗಾಗಿ ತಿರ್ಮಾನ ಕಾಯ್ದಿರಿಸಲಾಗಿದೆ | - |
| 105 | ವಿಜಯಪುರ | ಶ್ರೀ ಆನಂದ ಭೀಮಪ್ಪ ಟಕ್ಕಳಕಿ<br>ಸಾ: ಕವಲಗಿ ತಾ: ಬ.ಬಾಗೇವಾಡಿ | 13/9/2018 | 6.00 | ಕೆನರಾ ಬ್ಯಾಂಕ್ ತೆಲಗಿ 522637/- | 29/09/2018 | ಪರಿಹಾರ ವಿತರಿಸಬೇಕಾಗಿದೆ. | - | - | - |
| 106 | ವಿಜಯಪುರ | ಗಿರೆಪ್ಪ ಶಂಕ್ರೆಪ್ಪ ಚಾಂದಕವಠೆ<br>ಸಾ:ದೇವರ ನಾವದಗಿ ತಾ: ಸಿಂದಗಿ | 23/9/2018 | 3.35 | ಕೆವಿಜಿಬಿ ದೇವರ ನಾವದಗಿ 175000/-<br>ಕೈಗಡ ಸಾಲ 300000/- | 13/11/2018 | ಪರಿಹಾರ ವಿತರಿಸಬೇಕಾಗಿದೆ. | - | - | - |
| 107 | ವಿಜಯಪುರ | ಶ್ರೀ ಸಿದ್ದರಾಮ ಹಣಮಂತ ಹುಜಿನ<br>ಸಾ॥ ಹಳಗುಣಕಿ ತಾ: ಇಂಡಿ | 10/05/2018 | 3.00 | ಪಿ.ಎಲ್.ಡಿ ಬ್ಯಾಂಕ ಇಂಡಿ 550000/-<br>ಪಿ.ಕೆ.ಪಿ.ಎಸ್ ಹಳಗುಣಕಿ 50000/-<br>ಕೈಗಡ ಸಾಲ 100000/- | - | - | - | - | ಮಂಡಿಸಬೇಕಾಗಿದೆ |
| 108 | ವಿಜಯಪುರ | ಶ್ರೀ ಸಾಯಿಬಣ್ಣ ಕೃಷ್ಣಪ್ಪ ಧೂಳಬಾ<br>ಸಾ॥ ಬಮ್ಮನ್ನಳ್ಳಿ ತಾ: ಸಿಂದಗಿ | 10/11/2018 | - | - | 13/11/2018 | - | - | ಎಫ್.ಎಸ್.ಎಲ್ ವರದಿಗಾಗಿ ತಿರ್ಮಾನ ಕಾಯ್ದಿರಿಸಲಾಗಿದೆ | - |
| 109 | ವಿಜಯಪುರ | ಶ್ರೀ ಬಸವರಾಜ ಸದಾಶಿವ ಚೌಧರಿ<br>ಸಾ॥ ಇಂಗಳಗಿ ತಾ: ಸಿಂದಗಿ | 28/10/2018 | 6.00 | ಸಿಂಡಿಕೇಟ್ ಬ್ಯಾಂಕ್, ದೇ.ಹಿಪ್ಪರಗಿ 110000/- | 13/11/2018 | | - | ಎಫ್.ಎಸ್.ಎಲ್ ವರದಿಗಾಗಿ ತಿರ್ಮಾನ ಕಾಯ್ದಿರಿಸಲಾಗಿದೆ | - |
| 110 | ವಿಜಯಪುರ | ಶ್ರೀ ಮಲ್ಲಪ್ಪ ಗುರುಲಿಂಗಪ್ಪ ಹಡಪದ<br>ಸಾ॥ ಚಿಕ್ಕರೂಗಿ ತಾ: ಸಿಂದಗಿ | 31/10/2018 | 6.10 | ಕೆವಿಜಿಬಿ ಚಿಕ್ಕರೂಗಿ 300000/- | 13/11/2018 | | - | ಎಫ್.ಎಸ್.ಎಲ್ ವರದಿಗಾಗಿ ತಿರ್ಮಾನ ಕಾಯ್ದಿರಿಸಲಾಗಿದೆ | - |

| ಕ್ರಸಂ | ಜಿಲ್ಲೆ | ರೈತರ ಹೆಸರು ಮತ್ತು ವಿಳಾಸ | ಮರಣದ ದಿನಾಂಕ | ಸರ್ವೆ ನಂ ಮತ್ತು ವಿಸ್ತೀರ್ಣ(ಎ.ಗುಂಟೆ) | ಸಾಲದ ವಿವರ | ಸಮಿತಿಯಲ್ಲಿ ಮಂಡಿಸಿದ ದಿನಾಂಕ | ಸಮಿತಿಯಲ್ಲಿ ಅರ್ಹ ಪ್ರಕರಣವೆಂದು ತೀರ್ಮಾನಿಸಿದ್ದು ಪರಿಹಾರ ವನ್ನು ನೀಡದಿರುವುದು | ಸಮಿತಿಯಲ್ಲಿ ತಿರಸ್ಕರಿಸಿದ್ದು ಮತ್ತು ತಿರಸ್ಕರಿಸಲು ಕಾರಣಗಳು | ಸಮಿತಿಯಲ್ಲಿ ತೀರ್ಮಾನಿಸಲು ಬಾಕಿ ಇರುವ ಪ್ರಕರಣ | |
|---|---|---|---|---|---|---|---|---|---|---|
| | | | | | | | | | ಎಫ್ ಎಸ್ ಎಲ್ ವರದಿಗಾಗಿ ಮತ್ತು UDR No. | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 111 | ವಿಜಯಪುರ | ಶ್ರೀ ಬಸಪ್ಪ ಭೀಮಪ್ಪ ಯಾತಗಿರಿ ಸಾ: ತಮದಡ್ಡಿ ತಾ: ಮುದ್ದೇಬಿಹಾಳ | 31/10/2018 | 3.0 | ಪಿ.ಕೆ.ಪಿ.ಎಸ್ ತಮದಡ್ಡಿ 35000/- | - | | - | - | ಮಂಡಿಸಬೇಕಾಗಿದೆ |
| 112 | ವಿಜಯಪುರ | ಶ್ರೀ ಶಿವಾನಂದ ಬಸಪ್ಪಾ ರೇವಡಿಹಾಳ ಸಾ: ಗುಂಡಕರ್ಜಗಿ ತಾ: ಮುದ್ದೇಬಿಹಾಳ | 11/07/2018 | 3.37 | ಎಸ್.ಬಿ.ಐ ಬಸರಕೋಡ 300000/- | - | | - | - | ಮಂಡಿಸಬೇಕಾಗಿದೆ |
| 113 | ವಿಜಯಪುರ | ಶ್ರೀ ಗುರಪ್ಪ ಮಲ್ಲಪ್ಪ ತಳೆವಾಡ ಸಾ: ಸಂಗಾಪುರ ಎಚ್. ಎಸ್. ತಾ: ವಿಜಯಪುರ | 25/11/2018 | 3.08 | ಪಿ.ಕೆ.ಪಿ.ಎಸ್ ಸಂಗಾಪುರ 266600/- ಕೈಗಡ ಸಾಲ 400000/- | - | | - | - | ಮಂಡಿಸಬೇಕಾಗಿದೆ |
| 114 | ಯಾದಗಿರಿ | ಬಸವರಾಜ ತಂ ಧರ್ಮಣ್ಣ ತಳವಾರ ಸಾ/ಹಗರಟಗಿ ಕೋಡೆಕಲ | 8.06.2018 | ಸ. ನಂ 426/ಆ/3 3.05(ತಂದೆಯ ಹೆಸರಲ್ಲಿ) | ಪಿ.ಕೆ.ಜಿ.ಬಿ ಕೊಡೇಕಲರೊ. 100000 (ತಂದೆಯ ಹೆಸರಲ್ಲಿ) | ಮಂಡಿಸಲಾಗಿದೆ | | ತಿರಸ್ಕರಿಸಿದೆ | | |
| 115 | ಯಾದಗಿರಿ | ಗೋವಿಂದಪ್ಪ ತಂದೆ ಭೀಮಣ್ಣ ಸಾ॥ ವಿಭೂತಿಹಳ್ಳಿ ಹೂ॥ ಶಹಾಪೂರ ತಾ॥ ಶಹಾಪೂರ | 11/08/2018 | ಸರ್ವೆ ನಂ. 489, 1.03 | ಕೈ ಸಾಲ 610000 ರೂ | ಮಂಡಿಸಲಾಗಿದೆ | | ತಿರಸ್ಕರಿಸಲಾಗಿದೆ. | | |
| 116 | ಯಾದಗಿರಿ | ಮಹಾಂತೇಶ ತಂದೆ ಬೆನಕಪ್ಪ ಸಾ॥ ಹಳ್ಳಿಸಗರ ಹೊ॥ ಶಹಾಪೂರ | 11/09/2018 | ಸರ್ವೆ ನಂ. 269/1 ತಾಯಿಯ ಹೆಸರಿನಲ್ಲಿ 9 ಎಕರೆ | ಪಿ.ಎಸ್.ಎಸ್.ಎನ್ ಹಳಿಸಗರ104000 ರೂ. | ಮಂಡಿಸಲಾಗಿದೆ | ಶಿಫಾರಸ್ಸು ಮಾಡಿದೆ | | | |
| 117 | ಯಾದಗಿರಿ | ಗೋವಿಂದಪ್ಪ ತಂದೆ ಭೀಮಣ್ಣ ಸಾ॥ ರೇಟ್ಟೇಕೇರಾ ಹೂ॥ ಗೋಗಿ ತಾ॥ ಶಹಾಪೂರ | 11/09/2018 | ಸರ್ವೆ ನಂ. 91 3-00 | ಪಿ.ಎಸ್.ಎಸ್.ಎನ್ ರೇಟ್ಟೇಗೇರಾ20000 ರೂ. | | | | | |
| 118 | ಯಾದಗಿರಿ | ಮರೆಪ್ಪ ತಂದೆ ಯಂಕಪ್ಪ ಕಾಶಿರಾಜ ಸಾ॥ ವನದುರ್ಗ ಹೊ॥ ಗೋಗಿ | 13/09/2018 | ಸರ್ವೆ ನಂ. 43 | ಪಿಕೆಜಿಬಿ ವನದುರ್ಗ 25000 ರೂ. | ಮಂಡಿಸಲಾಗಿದೆ | ಶಿಫಾರಸ್ಸು ಮಾಡಿದೆ | | | |
| 119 | ಯಾದಗಿರಿ | ಪರ್ವತರೆಡ್ಡಿ ತಂ. ಮಡಿವಾಳಪ್ಪ ನಾಲ್ವಾರ . ಮುದ್ನೂರ | 12.09.2018 | | ಇಲ್ಲ | ಇಲ್ಲ | ಇಲ್ಲ | | | |
| 120 | ಯಾದಗಿರಿ | ದ್ಯಾವಪ್ಪ ತಂ. ಶರಣಪ್ಪ ರಂಗ ಸಾ॥ ನಗನೂರ | 30.09.2018 | | | | | | | |
| 121 | ಯಾದಗಿರಿ | ಹಣಮಂತ ತಂದೆ ಸಾಯಿಬಣ್ಣ ಸಾ॥ ಗೋಗಿ. ಕೆ ಹೊ॥ ಗೋಗಿ | 27/09/2018 | ಸರ್ವೆ ನಂ. 534 | ಎಸ್ ಬಿ ಐ ಗೋಗಿ 50000 ರೂ | ಮಂಡಿಸಲಾಗಿದೆ | ಶಿಫಾರಸ್ಸು ಮಾಡಿದೆ | | | |
| 122 | ಯಾದಗಿರಿ | ಭೀಮಶಂಕರ ತಂದೆ ಚನ್ನಬಸಪ್ಪ ಸಾ॥ ರೇಟ್ಟೇಕೇರಾ ಹೊ॥ ಗೋಗಿ | 27/09/2018 | ಸರ್ವೆ ನಂ. 114 | ಐಸಿಐಸಿಐ ಶಹಾಪೂರ 80000 ರೂ | | | | | |
| 123 | ಯಾದಗಿರಿ | ಗುರುಬಾಯಿ ಗಂ. ಭೀಮರೆಡ್ಡಿ ಸಾ॥ ನಗನೂರ ತಾ॥ ಸುರಪೂರ | 2.11.2018 | ಇಲ್ಲ | ಇಲ್ಲ | ಇಲ್ಲ | ಇಲ್ಲ | | | |

| ಕ್ರಸಂ | ಜಿಲ್ಲೆ | ರೈತರ ಹೆಸರು ಮತ್ತು ವಿಳಾಸ | ಮರಣದ ದಿನಾಂಕ | ಸರ್ವೆ ನಂ ಮತ್ತು ವಿಸ್ತೀರ್ಣ(ಎ.ಗುಂಟೆ) | ಸಾಲದ ವಿವರ | ಸಮಿತಿಯಲ್ಲಿ ಮಂಡಿಸಿದ ದಿನಾಂಕ | ಸಮಿತಿಯಲ್ಲಿ ಅರ್ಹ ಪ್ರಕರಣವೆಂದು ತೀರ್ಮಾನಿಸಿದ್ದು ಪರಿಹಾರ ವನ್ನು ನೀಡದಿರುವುದು | ಸಮಿತಿಯಲ್ಲಿ ತಿರಸ್ಕರಿಸಿದ್ದು ಮತ್ತು ತಿರಸ್ಕರಿಸಲು ಕಾರಣಗಳು | ಸಮಿತಿಯಲ್ಲಿ ತೀರ್ಮಾನಿಸಲು ಬಾಕಿ ಇರುವ ಪ್ರಕರಣ | |
|---|---|---|---|---|---|---|---|---|---|---|
| | | | | | | | | | ಎಫ್ ಎಸ್ ಎಲ್ ವರದಿಗಾಗಿ ಮತ್ತು UDR No. | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 124 | ಯಾದಗಿರಿ | ಮಲ್ಲಪ್ಪ ತಂ. ಭೀಮರಾಯ ಸಾ॥ ಯಾಳಗಿ ತಾ॥ ಸುರಪೂರ | 1.11.2018 | ಸ.ನಂ:14/1-19 ಗುಂಟೆ | ಪಿ.ಕೆ.ಜಿ.ಬಿ ಸಾಲ ಪಡದ600000 | ಇಲ್ಲ | ಇಲ್ಲ | | | |
| 125 | ಯಾದಗಿರಿ | ಮರೆಪ್ಪ ತಂ. ರಂಗಪ್ಪ ಸಾ॥ ಕುಪಗಲ್ ತಾ॥ ಸುರಪೂರ | | | | | | | | |
| 126 | ಯಾದಗಿರಿ | ಶ್ರೀ ಶೇಖಪ್ಪ ತಂದೆ ತಾಯಪ್ಪ ಸಾ: ಶಿವಪೂರ ಪೋ: ವಡಗೇರಾ ತಾ॥ ಶಹಾಪೂರ | 02.10.2018 | ಸ.ನಂ. 24/1 4 ಎಕರೆ 10 ಗುಂ. | ಪಿ.ಕೆ.ಜಿ.ಬಿ. ಬೆಂಡೆಬೆಂಬಳಿ ಹಾಗೂ ಕೈಸಾಲ ರೂ. 1,00,000/- ಸಾಲ ಹಾಗೂ ರೂ.3,00,000/- | ಪೋಲಿಸ್ ಇಲಾಖೆಯ ಅಂತಿಮ ವರದಿ ನಿರೀಕ್ಷಿಸಲಾಗುತ್ತಿದೆ | - | | | |
| 127 | ಯಾದಗಿರಿ | ಶ್ರೀ ಪರಮಣ್ಣ ತಂದೆ ರಾಯಪ್ಪ ಕೊಂಬಿನ ಸಾ:ಪ ನಾಯ್ಕಲ್ ಪೋ; ದೋರನಹಳ್ಳಿ ತಾ॥ ಶಹಾಪೂರ | 21.10.2018 | ಸ.ನಂ. 821/8 3ಎಕರೆ 28 ಗುಂ .821 2 ಎಕರೆ 12 ಗುಂ. | ಎಸ್.ಬಿ.ಐ. ಬ್ಯಾಂಕ ಖಾನಾಪೂರ ಹಾಗೂ ಖಾಸಗಿ ಸಾಲ 1,07,249/- ಹಾಗೂ 4,00,000/- | ಮಂಡಿಸಲಾಗಿದೆ | | ತಿರಸ್ಕರಿಸಲಾಗಿದೆ. | | |
| 128 | ಯಾದಗಿರಿ | ಶ್ರೀ ಥಾವರು ತಂದೆ ಲಕ್ಷ್ಮನಾಯಕ ಚವ್ಹಾಣ ಸಾ: ಉಕ್ಕನಾಳ (ರಾಮಚಂದ್ರನಾಯಕ ತಾಂಡಾ) ಹೋ: ಗೋಗಿ (ಕೆ) ತಾ॥ ಶಹಾಪೂರ | 22.10.2018 | ಸ.ನಂ.21/1 2-00 ಎಕರೆ ಸ.ನಂ.22/4 0-25 ಗುಂ. | ಎಸ್.ಬಿ.ಐ. ಗೋಗಿ ಹಾಗೂ ಕೈಸಾಲ ರೂ. 1,00,000/- ಸಾಲ ಹಾಗೂ 4,00,000/- ರೂ. | ಪೋಲಿಸ್ ಇಲಾಖೆಯ ಅಂತಿಮ ವರದಿ ನಿರೀಕ್ಷಿಸಲಾಗುತ್ತಿದೆ | - | | | |
| 129 | ಯಾದಗಿರಿ | ಭೀಮರಾಯ ತಂದೆ ಯಂಕಪ್ಪ ಸಾ; ಬೆನಕನಹಳ್ಳಿ (ಕೆ) ಸಾ; ವಡಗೇರಾ ತಾ॥ ಶಹಾಪೂರ | 23.10.2018 | ಸ.ನಂ. 72 ಪಿ 3-14 ಗುಂ. | ಪಿ.ಕೆ.ಜಿ.ಬಿ. ಬೆಂಡೆಬೆಂಬಳಿ & ಸೊಸೈಟಿಯಲ್ಲಿ 3,50,000/- | ಪೋಲಿಸ್ ಇಲಾಖೆಯ ಅಂತಿಮ ವರದಿ ನಿರೀಕ್ಷಿಸಲಾಗುತ್ತಿದೆ | - | | | |
| 130 | ಯಾದಗಿರಿ | ಸಣ್ಣ ದೇವಪ್ಪ ತಂದೆ ಶಾಂತವೀರಪ್ಪ ಸಾ॥ ಬಾಡಿಯಾಳ ಪೊ. ಸೈದಾಪೂರ ತಾ॥ ಯಾದಗಿರಿ | 01/11/2018 | 160 (20-28 | | | | | | |
| 131 | ಬೆಂ. ಗ್ರಾಮಾಂತರ | ಜಿ.ಎಸ್. ದೇವರಾಜು ಬಿನ್ ನಾರಾಯಣಪ್ಪ, ಗಾಳಿಬೇಲಿಕೋಟೆ, ದೊಡ್ಡಬೆಳವಂಗಲ, ದೊಡ್ಡಬಳ್ಳಾಪುರ | 24.08.2018 | 61/2-1.15ಎ | ರೂ. 4.00 ಲಕ್ಷ ಕೈಸಾಲ | 10.10.2018 | - | - | ಎಫ್ ಎಸ್ ಎಲ್ ವರದಿಗಾಗಿ ಬಾಕಿ ಇರುತ್ತದೆ. UDR No 0027/2018 | |
| 132 | ಬೆಂ. ಗ್ರಾಮಾಂತರ | ರಘು ಬಿನ್ ವೆಂಕಟರಾಮಯ್ಯ, ನಾರನಹಳ್ಳಿ, ದೊಡ್ಡಬೆಳವಂಗಲ, ದೊಡ್ಡಬಳ್ಳಾಪುರ | 2.09.2018 | 15/2,3/2-3ಎ | ರೂ. 3.00 ಲಕ್ಷ ಕೈಸಾಲ | 10.10.2018 | - | ವೈಯಕ್ತಿಕ ಕಾರಣಗಳಿಂದ ಆತ್ಮಹತ್ಯೆ ಮಾಡಿಕೊಂಡಿರುತ್ತಾರೆಯೆಂದು ಸಭೆಯಲ್ಲಿ ತೀರ್ಮಾನಿಸಲಾಗಿರುತ್ತದೆ. | 0028/2018 | |
| 133 | ಬೆಂಗಳೂರು ನಗರ | - | - | - | - | - | - | - | - | - |
| 134 | ಧಾರವಾಡ | ಶ್ರೀ.ದೇವೆಂದ್ರಪ್ಪ ರಾಜಪ್ಪ ಭಜಂತ್ರಿ ವಯಃ:43 ವರ್ಷ ಸಾ॥ನವಲೂರ ಜನತಾ ಪ್ಲಾಟ್, ಧಾರವಾಡ | 10.10.2018 | 6.17 | ಕೆ.ವಿ.ಜಿ.ಬ್ಯಾಂಕ ನವಲೂರ ಇಲ್ಲಿ 1,67,000=00 ಲಕ್ಷ ರೂ ಸಾಲ ಇದೆ. | 21-11-2018 ರಂದು ಸಭೆ ಜರುಗಿಸಿದ್ದು ಎಫ್.ಎಸ್.ಎಲ್.ವರದಿಗಾಗಿ ಬಾಕಿ ಇದೆ. | ಇಲ್ಲ | ಇಲ್ಲ | ಹೌದು ಮತ್ತು ಸಂ. 0032/2018 ವಿದ್ಯಾಗಿರಿ ಧಾರವಾಡ ಪೋಲೀಸ ಠಾಣೆ | ಇಲ್ಲ |
| 135 | ಧಾರವಾಡ | ಶ್ರೀ.ನಾಗಪ್ಪ ದತ್ತಕ ತಂದೆ ನಾಗಪ್ಪ ತಳವಾರ ಸಾ॥ನವಲಗುಂದ | 05.11.2016 | 5.16 | ಇಲ್ಲ | 30.6.2018 | ಇಲ್ಲ | ಮೃತರ ಹಾಗೂ ಕುಟುಂಬದ ಸದಸ್ಯರ ಹೆಸರಿನಲ್ಲಿ ಅಧಿಕೃತವಾದ ಬೆಳೆಸಾಲದ ದಾಖಲೆಗಳು ಇಲ್ಲವೆಂದು ಸಂಬಂಧಿಸಿದ ಬ್ಯಾಂಕ ನೀಡಿದ ಪ್ರಮಾಣ ಪತ್ರದಿಂದ ತಿರಸ್ಕರಿಸಿದೆ. | ಇಲ್ಲ | ಇಲ್ಲ |

| ಕ್ರಸಂ | ಜಿಲ್ಲೆ | ರೈತರ ಹೆಸರು ಮತ್ತು ವಿಳಾಸ | ಮರಣದ ದಿನಾಂಕ | ಸರ್ವೆ ನಂ ಮತ್ತು ವಿಸ್ತೀರ್ಣ(ಎ.ಗುಂಟೆ) | ' ಸಾಲದ ವಿವರ | ಸಮಿತಿಯಲ್ಲಿ ಮಂಡಿಸಿದ ದಿನಾಂಕ | ಸಮಿತಿಯಲ್ಲಿ ಅರ್ಹ ಪ್ರಕರಣವೆಂದು ತೀರ್ಮಾನಿಸಿದ್ದು ಪರಿಹಾರ ವನ್ನು ನೀಡದಿರುವುದು | ಸಮಿತಿಯಲ್ಲಿ ತಿರಸ್ಕರಿಸಿದ್ದು ಮತ್ತು ತಿರಸ್ಕರಿಸಲು ಕಾರಣಗಳು | ಸಮಿತಿಯಲ್ಲಿ ತೀರ್ಮಾನಿಸಲು ಬಾಕಿ ಇರುವ ಪ್ರಕರಣ | |
|---|---|---|---|---|---|---|---|---|---|---|
| | | | | | | | | | ಎಫ್ ಎಸ್ ಎಲ್ ವರದಿಗಾಗಿ ಮತ್ತು UDR No. | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 136 | ಧಾರವಾಡ | ಶ್ರೀ ಯಲ್ಲಪ್ಪ ಶಿದ್ದಪ್ಪ ಹೆಬಸೂರ ವಯಾ:23 ವರ್ಷ ಸಾ॥ಮೊರಬ ತಾ॥ನವಲಗುಂದ | 3.10.2018 | 3.00 | ಮೃತರ ತಂದೆಯ ಹೆಸರಿನಲ್ಲಿ ವಿಜಯಾ ಬ್ಯಾಂಕ ಮೊರಬ ಇಲ್ಲಿ 2.13142 ಲಕ್ಷ ರೂಗಳ ಸಾಲ ಇದೆ. | 30.6.2019 | ಇಲ್ಲ | ದಿನಾಂಕ: 14/06/2018 ಸಭೆಯಲ್ಲಿ ತಿರಸ್ಕರಿಸಿದೆ / ಮೃತರು ವಿಷಸೇವನೆಯಿಂದ ಆತ್ಮಹತ್ಯ ಮಾಡಿಕೊಂಡಿರುತ್ತಾರೆಂದು ಪ್ರಕರಣ ದಾಖಲಾಗಿದ್ದು, ಸದರಿ ಪ್ರಕರಣವು ಎಫ್.ಎಸ್.ಎಲ್ ವರದಿಗಾಗಿ ಸಿಫಾರಸ್ಸು ಮಾಡಲಾಗಿದ್ದು, ಸದರಿ ಎಫ್.ಎಸ್.ಎಲ್ ವರದಿಯಲಿ | ಇಲ್ಲ | ಇಲ್ಲ |
| 137 | ಧಾರವಾಡ | ನೀಲವ್ವ ಮಲ್ಲಿಕಾರ್ಜುನ ಕಾಲವಾಡ ಸಾ॥ ಮೊರಬ ತಾ॥ನವಲಗುಂದ | 06.10.2018 | 10/1+2ಅ | ಪಿ.ಎ.ಸಿ.ಎಸ್.ಮೊರಬ ಇವರಲ್ಲಿ 27-03-2018 ರಂದು ರೂ. 1,04,900/- ಸಾಲ ಪಡೆದಿರುತ್ತಾರೆ. | 12.10.2018 | ಇಲ್ಲ | ದಿನಾಂಕ: 14/06/2018 ಸಭೆಯಲ್ಲಿ ತಿರಸ್ಕರಿಸಿದೆ / ಮೃತರು ಪಿ.ಎ.ಸಿ.ಎಸ್. ಮೊರಬ ಇವರಲ್ಲಿ ದಿನಾಂಕ:27-03-2018 ರಂದು ರೂ.1,04,900/- ಸಾಲ ಪಡೆದಿದ್ದು, ಸದರಿ ಸಾಲವು ಚಾಲತಿ ಇದ್ದು ಅಲ್ಲದೆ ಪಿ.ಎ.ಸಿ.ಎಸ್.ಮೊರಬ ಇವರ ವರದಿ ಪ್ರಕಾರ ಸಾಲ ಮನ್ನಾ ಯೋಜನೆಯಡಿ ಒಳಪಟ್ಟಿರುತ್ತದೆ. ಹಾಗೂ ಸದರಿ ಸಾಲವು ಚಾಲತಿ ಸಾಲವಗಿರುವದರಿಂದ ಸಾಲ ವಸೂಲಾತಿಗಾಗಿ ಯಾವುದೇ ನೋಟೀಸ್ಸು ವಗೈರೆ ನೀಡೀರುವುದಿಲ್ಲ. ಸದರಿ ಕಾರಣಗಳ್ಳಿಂದ ಪ್ರಕರಣವನ್ನು ತಿರಸ್ಕರಿಸಲಾಗಿದೆ. | ಇಲ್ಲ | ಇಲ್ಲ |
| 138 | ಧಾರವಾಡ | ಶ್ರೀ.ಮಲ್ಲಿಕಾರ್ಜುನ ಮರಿತಮ್ಮಪ್ಪ ಮಡಿವಾಳರ ವಯಾ::50 ವರ್ಷ ಸಾ॥ ಇಬ್ರಾಹಿಂಪುರ ತಾ॥ನವಲಗುಂದ | 12.11.2018 | ಮೃತರ ಹೆಸರಿನಲ್ಲಿ ಇಬ್ರಾಹಿಂ ಗ್ರಾಮದ ರಿಸನ:96/3 ಕ್ಷೇತ್ರ 2ಎ-06ಗು ಗುಡಿಸಾಗರ ರಿಸನ:248/2ಅ ಕ್ಷೇತ್ರ 4ಎ-27ಗು ಜಮೀನು | ಮೃತರ ಹೆಸರಿನಲ್ಲಿ ಎಸ್.ಬಿ.ಆಯ್ ನವಲಗುಂದ ಶಾಖೆಯಲ್ಲಿ ರೂ 3.00 ಲಕ್ಷ ಸಾಲ ಹೊಂದಿರುತ್ತಾರೆ. | 20.11.2018 | ಇಲ್ಲ | .20.10.2018 .20.11.2018 ರಂದು ಸಭೆ ಜರುಗಿಸಿದೆ. ಎಫ್.ಎಸ್.ಎಲ್. ವರದಿಗಾಗಿ ಬಾಕಿ ಇದೆ | ಹೌದು ಮತ್ತು ಸಂ.0044/2018 ನವಲಗುಂದ ಪೋಲೀಸ ಠಾಣೆ | ಇಲ್ಲ |
| 139 | ಧಾರವಾಡ | ಶ್ರೀ.ಸುರೇಶ ಯಲ್ಲಪ್ಪ ಸುಬರಗಟ್ಟಿ ವಯಾ:40 ವರ್ಷ ಸಾ॥ಇಂಗಳಗಿ ತಾ॥ಕುಂದಗೋಳ | 02.07.2018 | ಮೃತರ ಹೆಸರಿನಲ್ಲಿ ಜಂಟಿ ಖಾತೆಯಲ್ಲಿ ಇಂಗಳಗಿ ಗ್ರಾಮದ ರಿ.ಸ.ನ:244/3 ಕ್ಷೇತ್ರ 1ಎ-18ಗುಂ ಜಮೀನು ಜಂಟಿ ಖಾತೆಯಲ್ಲಿ ಇರುತ್ತದೆ. | ಯಾವುದೇ ಸಾಲ ಇರುವುದಿಲ್ಲ | 30.9.2018 | ಇಲ್ಲ | ಮೃತರು ಹಾಗೂ ಮೃತರ ಕುಟುಂಬ ಸದಸ್ಯರ ಹೆಸರಿನಲ್ಲಿ ಯಾವುದೇ ಅಧೀಕೃತ ಸಂಸ್ಥೆಗಳಲ್ಲಿ ಸಾಲ ಇರುವುದಿಲ್ಲ ಕೆ.ವಿ.ಜಿ.ಬ್ಯಾಂಕ ಇಂಗಳಗಿ ಇವರು ಸಾಲ ಇರುವುದಿಲ್ಲ ಅಂತಾ ಪ್ರಮಾಣ ನೀಡಿರುತ್ತಾರೆ. | | |
| 140 | ಧಾರವಾಡ | ಶ್ರೀ.ರವಿ ಹನಮಂತಪ್ಪ ಕಾಳೆ ವಯಾ:25 ವರ್ಷ ಸಾ॥ಯರಿನಾರಾಯಣಪುರ ತಾ॥ಕುಂದಗೋಳ | 28.8.2018 | ಮೃತರ ತಂದೆಯ ಹೆಸರಿನಲ್ಲಿ ಜಂಟಿ ಖಾತೆಯಲ್ಲಿ ಯರಿನಾರಾಣಪುರ ಗ್ರಾಮದ ರಿಸನ:17/1ಬಿ 9ಎ-00ಗು, 17/1ಅ 4ಎ-19ಗುಂ, ಇರುತ್ತದೆ. | ಯಾವುದೇ ಸಾಲ ಇರುವುದಿಲ್ಲ | 30.9.2018 | ಇಲ್ಲ | ಸದರಿಯವರು ಮನೆಯವರು ಬೈದುದ್ದನ್ನು ಮಾನಸಿಕ ಮಾಡಿಕೊಂಡು ಆತ್ಮಹತ್ಯೆ ಮಾಡಿಕೊಂಡಿರುತ್ತಾರೆ ಅಂತಾ ದಾಖಲಿಸಿರುವುದರಿಂದ ತಿರಸ್ಕರಿಸಿದೆ. | ಇಲ್ಲ | ಇಲ್ಲ |

| ಕ್ರಸಂ | ಜಿಲ್ಲೆ | ರೈತರ ಹೆಸರು ಮತ್ತು ವಿಳಾಸ | ಮರಣದ ದಿನಾಂಕ | ಸರ್ವೆ ನಂ ಮತ್ತು ವಿಸ್ತೀರ್ಣ(ಎ.ಗುಂಟೆ) | ಸಾಲದ ವಿವರ | ಸಮಿತಿಯಲ್ಲಿ ಮಂಡಿಸಿದ ದಿನಾಂಕ | ಸಮಿತಿಯಲ್ಲಿ ಅರ್ಹ ಪ್ರಕರಣವೆಂದು ತೀರ್ಮಾನಿಸಿದ್ದು ಪರಿಹಾರ ವನ್ನು ನೀಡದಿರುವುದು | ಸಮಿತಿಯಲ್ಲಿ ತಿರಸ್ಕರಿಸಿದ್ದು ಮತ್ತು ತಿರಸ್ಕರಿಸಲು ಕಾರಣಗಳು | ಸಮಿತಿಯಲ್ಲಿ ತೀರ್ಮಾನಿಸಲು ಬಾಕಿ ಇರುವ ಪ್ರಕರಣ | |
|---|---|---|---|---|---|---|---|---|---|---|
| | | | | | | | | | ಎಫ್ ಎಸ್ ಎಲ್ ವರದಿಗಾಗಿ ಮತ್ತು UDR No. | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 141 | ಧಾರವಾಡ | ಶ್ರೀ.ಹುಲಿಗೆಪ್ಪ ವೆಂಕಪ್ಪ ವಾಲೀಕಾರ ಉರ್ಫ ತಳವಾರ ವಯಃ58 ವರ್ಷ ಸಾ:ಸುಲ್ತಾನಪುರ ತಾ:ಕುಂದಗೋಳ | 3.9.2018 | ಮೃತರ ಹೆಸರಿನಲ್ಲಿ ಜಂಟಿ ಖಾತೆಯಲ್ಲಿ ಸುಲ್ತಾನಪುರ ಗ್ರಾಮದ ರಿಸನ:148/5 6ಎ-11ಗು. 150/3+6 5ಎ-08ಗು ಜಮೀನು ಇರುತ್ತದೆ. | ಯಾವುದೇ ಸಾಲ ಇರುವುದಿಲ್ಲ | 30.9.2019 | ಇಲ್ಲ | ಮೃತರು ಹಾಗೂ ಮೃತರ ಕುಟುಂಬ ಸದಸ್ಯರ ಹೆಸರಿನಲ್ಲಿ ಯಾವುದೇ ಅಧೀಕೃತ ಸಂಸ್ಥೆಗಳಲ್ಲಿ ಸಾಲ ಇರುವುದಿಲ್ಲ ಕೆ.ವಿ.ಜಿ.ಬ್ಯಾಂಕ ಇಂಗಳಗಿ ಇವರು ಸಾಲ ಇರುವುದಿಲ್ಲ ಅಂತಾ ಪ್ರಮಾಣ ಪತ್ರ ನೀಡಿರುತ್ತಾರೆ. | ಇಲ್ಲ | ಇಲ್ಲ |
| 142 | ಧಾರವಾಡ | ಶ್ರೀ.ಬುದ್ದಿವಂತಪ್ಪ ಫಕ್ಕೀರಪ್ಪ ಕುರುಪಿನಹಳ್ಳಿ ವಯಾ: ಸಾ:ಯರೇಬೂದಿಹಾಳ ತಾ:ಕುಂದಗೋಳ | 6.10.2018 | ಮೃತರ ತಂದೆಯ ಹೆಸರಿನಲ್ಲಿ ಯರೇಬೂದಿಹಾಳ ಗ್ರಾಮದ ರಿಸನ:33/1ಎ ಕ್ಷೇತ್ರ 7ಎ-20ಗು ಜಮೀನು ಇರುತ್ತದೆ. | ಕೆ.ವಿ.ಜಿ.ಬ್ಯಾಂಕ ಯರೇಬೂದಿಹಾಳ ಇಲ್ಲಿ 1.00 ಲಕ್ಷ ರೂ ಸಾಲ ಇದೆ. | 12.10.2018 | ಇಲ್ಲ | ಮೃತರು ಕಾಲುಜಾರಿ ಮರಣ ಹೊಂದಿರುವುದರಿಂದ ತಿರಸ್ಕರಿಸಿದೆ. | ಇಲ್ಲ | ಇಲ್ಲ |
| 143 | ಧಾರವಾಡ | ಶ್ರೀ ಭೀಮಪ್ಪ ಉರ್ಫ ಮುದಕ್ಕಪ್ಪ ಉರ್ಫ ಹನಮಂತಪ್ಪ ಮಣಸಿನಕಾಯಿ ಸಾ॥ ಬ್ಯಾಹಟ್ಟಿ ತಾ. ಹುಬ್ಬಳ್ಳಿ | 8..10.2018 | ಮೃತರ ತಂದೆಯ ಹೆಸರಿನಲ್ಲಿ ಬ್ಯಾಹಟ್ಟಿ ಗ್ರಾಮದ ರಿಸನ:27 ಕ್ಷೇತ್ರ 4ಎ-00ಗು ಜಮೀನು ಇರುತ್ತದೆ. | ಸಿಂಡಿಕೇಟ ಬ್ಯಾಂಕ ಬ್ಯಾಹಟ್ಟಿ ಇಲ್ಲಿ 1.52 ಲಕ್ಷ ರೂ ಜಂಟಿ ಸಾಲ ಇದೆ. | 12.10.2018<br>20.11.2018 | ಇಲ್ಲ | ಸದರಿ ರೈತರು ಒಕ್ಕಲುತನ ಮಾಡುತ್ತಿರಲಿಲ್ಲ ತಂದೆ ಜೊತೆ ಸೇರಿ ಕೂಲಿ ಕೆಲಸಕ್ಕಾಗಿ ಬೇರೆ ಊರಿಗೆ ಹೋಗುತ್ತಿರುವುದಾಗಿ ತಿಳಿಸಿರುತ್ತಾರೆ. ತಮ್ಮ ಮಗ 6 ವರ್ಷಗಳ ಹಿಂದೆ | ಇಲ್ಲ | ಇಲ್ಲ |
| 144 | ಧಾರವಾಡ | ಶ್ರೀ.ಪ್ರಕಾಶ ರಂಕ್ಷಪ್ಪ ಕಿರೇಸೂರ ವಯಾ:43 ವರ್ಷಸಾ॥ಬ್ಯಾಹಟ್ಟಿ ತಾ॥ಹುಬ್ಬಳ್ಳಿ | 17.11.2018 | ಬ್ಯಾಹಟ್ಟಿ ಗ್ರಾಮದಲ್ಲಿ 26 ಎಕರೆ ಜಮೀನು ಇದೆ. | ಸಿಂಡಿಕೇಟ್ ಬ್ಯಾಂಕ ಹುಬ್ಬಳ್ಳಿ ಇಲ್ಲಿ 3.00 ಲಕ್ಷ ಪಿ.ಎಲ್.ಡಿ.ಬ್ಯಾಂಕ ನಲ್ಲಿ 4.85.000 ಲಕ್ಷಗಳ ಸಾಲ ಇದೆ. | 20.11.2018 | ತಾಲೂಕಿಗೆ ಅನುದಾನ ನೀಡಲಾಗಿದ್ದು ವಿತರಣೆ ಪ್ರಕ್ರಿಯೆ ಚಾಲನೆಯಲ್ಲಿದೆ | ಇಲ್ಲ | ಇಲ್ಲ | ಇಲ್ಲ |
| 145 | ಧಾರವಾಡ | ಶ್ರೀ.ಯಲ್ಲಪ್ಪ ಬಸವಣ್ಣೆಪ್ಪ ಜಮ್ಮಿಹಾಳ ಸಾ॥ಹಿರೇಹೊನ್ನಳ್ಳಿ ತಾ॥ಕಲಘಟಗಿ | 13.06.2018 | ಅನ್ವಯಿಸುವದಿಲ್ಲ | ಅನ್ವಯಿಸುವದಿಲ್ಲ | 30.6.2018 12.7.2018 | ಇಲ್ಲ | ಮೃತರಿಗೆ ಆರೋಗ್ಯದಲ್ಲಿ ಅಸ್ವಸ್ಥವಾಗಿ ಹೃದಯಘಾತದಿಂದ ಮರಣ ಆಗಿರುವುದರಿಂದ ತಿರಸ್ಕರಿಸಿದೆ. | ಇಲ್ಲ | ಇಲ್ಲ |
| 146 | ತುಮಕೂರು | ಹೊಸೂರಪ್ಪ ಬಿನ್ ದಾಸಪ್ಪ, ಮೂಗಲಬೆಟ್ಟ, ನಿಡಗಲ್ ಹೋಬಳಿ, ಪಾವಗಡ ತಾಲ್ಲೂಕು. | 02.08.2018 | ಸ.ಸಂ.14/1-3.0 | ಪಿ.ಕೆ.ಜಿ.ಬಿ, ಕೆ.ಟಿ. ಹಳ್ಳಿ, -3.35 ಲಕ್ಷ | 05.12.2018 | ಅರ್ಹ ಪ್ರಕರಣ. ಪರಿಹಾರ ನೀಡಲು ಬಾಕಿ ಇರುತ್ತದೆ. | | | |
| 147 | ತುಮಕೂರು | ರಂಗನಾಥ್ ಬಿನ್ ರಂಗಪ್ಪ, ಬ್ರಹ್ಮದೇವರಹಳ್ಳಿ ಕಾವಲ್, ಮಿಡಿಗೇಶಿ ಹೋಬಳಿ, ಮಧುಗಿರಿ ತಾಲ್ಲೂಕು | 11.08.2018 | ಸ.ಸಂ.182-4.22 | ವಿ.ಎಸ್.ಎಸ್.ಎನ್ ಮಿಡಿಗೇಶಿ-0.25 ಲಕ್ಷ | 05.12.2018 | ಅರ್ಹ ಪ್ರಕರಣ. ಪರಿಹಾರ ನೀಡಲು ಬಾಕಿ ಇರುತ್ತದೆ. | | | |
| 148 | ತುಮಕೂರು | ಲಿಂಗಣ್ಣ ಬಿನ್ ಲೇ. ಸಣ್ಣ ಭೀಮಣ್ಣ, ಗಂಧಿಹಳ್ಳಿ, ಹುಲಿಕುಂಟೆ ಹೋಬಳಿ, ಶಿರಾ ತಾಲ್ಲೂಕು | 01.09.2018 | ಸ.ಸಂ.42<br>2.25 | ಕೆ.ಜಿ.ಬಿ. ದೊಡ್ಡಹುಲಿಕುಂಟೆ-1.60 ಲಕ್ಷ | 05.12.2018 | ಅರ್ಹ ಪ್ರಕರಣ. ಪರಿಹಾರ ಬಾಕಿ ಇರುತ್ತದೆ. | | | |
| 149 | ತುಮಕೂರು | ನೀಲಾಂಜನಮೂರ್ತಿ ಬಿನ್ ಮುದ್ದರಂಗಪ್ಪ, ಎಂಜಲಗೆರೆ ಮಜರೆ, ಕೆ.ಕೆ. ಹಳ್ಳಿ, ಹುಲಿಕುಂಟೆ ಹೋ. ಶಿರಾ ತಾ. | 19.10.2018 | ಮಾಹಿತಿ ಸಂಗ್ರಹಿಸಲಾಗುತ್ತಿದೆ | ಮಾಹಿತಿ ಸಂಗ್ರಹಿಸಲಾಗುತ್ತಿದೆ | | | | | ದಾಖಲಾತಿಗಳನ್ನು ಸಂಗ್ರಹಿಸಲಾಗುತ್ತಿದೆ. |
| 150 | ತುಮಕೂರು | ಶಿವಲಿಂಗಪ್ಪ ಬಿನ್ ಲಿಂಗಪ್ಪ, ಮಾಯಸಂದ್ರ, ಕಳ್ಳಂಬೆಳ್ಳ ಹೋ. ಶಿರಾ ತಾ. | 21.11.2018 | 63/2<br>7.07 | ಕೆ.ಜಿ.ಬಿ. ಬ್ರಹ್ಮಸಂದ್ರ -2.62 ಲಕ್ಷ | | | | FSL ವರದಿಗಾಗಿ ಮಾದರಿಯನ್ನು ಸಲ್ಲಿಸಬೇಕಾಗಿದೆ | |
| 151 | ಬಾಗಲಕೋಟ | ಮಂಜುನಾಥ ಬಸಪ್ಪ ಹೊಸಮನಿ. ಸಾ:ಜೀರಗನೂರ. ತಾ: ಬಿದಾಮಿ | 10.07.2018 | 13.39 | ಪಿ.ಕೆ.ಪಿ.ಎಸ್ ತಳಕವಾಡ 0.72 ಲಕ್ಷ, ಎಸ್.ಬಿ.ಐ. ಕಾಕನೂರ 6.50 ಲಕ್ಷ, ಗೋಲ್ಡ ಲೋನ್ 0.50 ಲಕ್ಷ, ಕಿತ್ತೂರ ಚೆನ್ನಮ್ಮ ಮಹಿಳಾ ಪಟ್ಟಣ ಸಹಕಾರಿ ಸಂಘ | 07.09.2018 | - | ರೈತರ ಹೆಸರಿನಲ್ಲಿ ಸಾಲ ಇರುವುದಿಲ್ಲ ಮೃತರ ತಂದೆ ಹೆಸರಿನಲ್ಲಿ ಸಾಲ ಇರುತ್ತದೆ | | - |

| ಕ್ರಸಂ | ಜಿಲ್ಲೆ | ರೈತರ ಹೆಸರು ಮತ್ತು ವಿಳಾಸ | ಮರಣದ ದಿನಾಂಕ | ಸರ್ವೆ ನಂ ಮತ್ತು ವಿಸ್ತೀರ್ಣ(ಎ.ಗುಂಟೆ) | ' ಸಾಲದ ವಿವರ | ಸಮಿತಿಯಲ್ಲಿ ಮಂಡಿಸಿದ ದಿನಾಂಕ | ಸಮಿತಿಯಲ್ಲಿ ಅರ್ಹ ಪ್ರಕರಣವೆಂದು ತೀರ್ಮಾನಿಸಿದ್ದು ಪರಿಹಾರ ವನ್ನು ನೀಡದಿರುವುದು | ಸಮಿತಿಯಲ್ಲಿ ತಿರಸ್ಕರಿಸಿದ್ದು ಮತ್ತು ತಿರಸ್ಕರಿಸಲು ಕಾರಣಗಳು | ಸಮಿತಿಯಲ್ಲಿ ತೀರ್ಮಾನಿಸಲು ಬಾಕಿ ಇರುವ ಪ್ರಕರಣ | |
|---|---|---|---|---|---|---|---|---|---|---|
| | | | | | | | | | ಎಫ್ ಎಸ್ ಎಲ್ ವರದಿಗಾಗಿ ಮತ್ತು UDR No. | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 152 | ಬಾಗಲಕೋಟ | ಶಿವಪ್ಪ ಕೇಶಪ್ಪ ಭೋಗಾಪೂರ, ಸಾ:ಹಿರೇಕೊಡಗಲಿ, ತಾ: ಹುನಗುಂದ | 03.08.2018 | 3.06 | ಪಿ.ಕೆ.ಪಿ.ಎಸ್ ಹಿರೇಕೊಡಗಲಿ 0.50ಲಕ್ಷ. | 11.10.2018 | - | ವಯಕ್ತಿಕ ಕಾರಣದಿಂದ ಸಾಲದ ಬಾಧೆಯಿಂದ ಮರಣ ಹೊಂದಿರುವುದಿಲ್ಲ | | - |
| 153 | ಬಾಗಲಕೋಟ | ಶೆಂಕ್ರೆಪ್ಪ ಬಸಪ್ಪ ಡೋಣಿ, ಸಾ: ಮಂಟೂರ, ತಾ: ಮುಧೋಳ | 29.09.2018 | 8.35 | ಎಸ್.ಬಿ.ಐ ಮಂಟೂರ 8.00 ಲಕ್ಷ, ಪಿ.ಕೆ.ಪಿ.ಎಸ್ ಮಂಟೂರ 1.00 ಲಕ್ಷ, ಒಟ್ಟು 9.00 ಲಕ್ಷ. | - | - | - | 037/2018 ಎಫ್.ಎಸ್.ಎಲ್ ವರದಿಗಾಗಿ ಬಾಕಿ | - |
| 154 | ಬೀದರ್ | ಅಮೃತ ತಂದೆ ಬಂಡೆಪ್ಪಾ ಗ್ರಾಮ: ಡಾಕುಳಗಿ, ಹುಮನಾಬಾಧ ತಾಲ್ಲೂಕು | 10.06.2018 | 142 1 ಎಕರೆ, 155 1.20 ಗುಂಟೆ | ಪಿ.ಕೆ.ಪಿ.ಎಸ್. ಬ್ಯಾಂಕ್, ರೂ.50000 | ಮಂಡಿಸಲಾಗಿದೆ | | ಮಾರ್ಗಸೂಚಿಯಂತಿರುವುದಿಲ್ಲ | | |
| 155 | ಬೀದರ್ | ಶ್ರೀ ಬಸವರಾಜ ತಂದೆ ಮಾರುತರೆಡ್ಡಿ ಸಾ॥ ಬರದಾಪುರ ತಾ॥ ಔರಾದ (ಬಾ) ಜಿ॥ಬೀದರ . ತಾಲ್ಲೂಕು: ಔರಾದ | 22.06.18 | 2.2 | ಕಿವಿಕಿಬ ಚೀಂತಾಕಿ & ಕೆನರಾ | 27.07.2018 | | ಮಾರ್ಗಸೂಚಿಯಂತಿರುವುದಿಲ್ಲ | | |
| 156 | ಬೀದರ್ | ಸತ್ಯಮ್ಮಾ ಗಂಡ ಧನರಟ್ಟಿ ಗ್ರಾಮ : ಜೇಲೂರ, ತಾ: ಬಸವಕಲ್ಯಾಣ | 07.07.2018 | 2.25 ಸರ್ವೆ ನಂ. 318 | ಎಸ್.ಬಿ.ಐ ಬ.ಕಲ್ಯಾಣ 96878 | ಮಂಡಿಸಬೇಕಿದೆ | | | | ಪೋಲಿಸ ಅಂತಿಮ ವರದಿ ಬರುವುದು ಬಾಕಿ ಇರುತ್ತದೆ) |
| 157 | ಬೀದರ್ | ಗುಣವಂತರಾವ ತಂದೆ ಬಾಬುರಾವ, ಗ್ರಾಮ: ವರವಟ್ಟಿ (ಕೆ), ತಾ: ಹುಮನಾಬಾಧ | 21.07.2018 | 69, 3.33 ಎ.ಗು | ಎಸ್.ಬಿ.ಐ ರೂ.4.00 ಲಕ್ಷ | | | | | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 158 | ಬೀದರ್ | ರೇವಣಪ್ಪ ಶಿವಲಿಂಗಪ್ಪ ಗ್ರಾಮ: ಮರೂರ | 28.07.2018 | 3.00 ಎ.ಗು | ಪಿ.ಕೆ.ಪಿ.ಎಸ್, ಜೋಳದಾಬಕಾ, ಪಿ.ಕೆ.ಜಿ.ಬಿ ರೂ.2.00 ಲಕ್ಷ | 23.11.2018 | ವಿತರಿಸಬೇಕಿದೆ | | | |
| 159 | ಬೀದರ್ | ಶ್ರೀ ಹಣುಮಾರಡ್ಡಿ ತಂದೆ ಶಂಕಲರಡ್ಡಿ ಸಾ॥ರಾಯಪಳ್ಳಿ ತಾ॥ಔರಾದ(ಬಾ) ಜಿ॥ಬೀದರ | 06.08.2018 | 8.00 ಎ.ಗು | ಎಸ್.ಬಿ.ಐ ರೂ.0.95 ಲಕ್ಷ | 07.11.2018 | | ಮಾರ್ಗಸೂಚಿಯಂತಿರುವುದಿಲ್ಲ | | |
| 160 | ಬೀದರ್ | ಶ್ರೀ ಹಣಮಂತಪ್ಪಾ ತಂದೆ ಚನ್ನಬಸಪ್ಪಾ ಸಾ॥ಜೋನ್ನೆಕೇರಿ ತಾ॥ಔರಾದ(ಬಾ) ಜಿ॥ಬೀದರ | 09.08.2018 | 5.1 ಎ.ಗು | ಕಿವಿಕಿಬ 40000 & 36000 | 23.11.2018 | ವಿತರಿಸಬೇಕಿದೆ | | | |
| 161 | ಬೀದರ್ | ಶ್ರೀ ಪ್ರಕಾಶ ತಂದೆ ಸಂಗಪ್ಪಾ ಸಾ॥ಬೋರ್ಗಿ(ಜೆ) ತಾ॥ಔರಾದ(ಬಾ) ಜಿ॥ಬೀದರ | 22.08.2018 | 4.00 ಎ.ಗು | ಪಿ.ಕೆ.ಪಿ.ಎಸ್ ರೂ. 25000 | | | ಮಾರ್ಗಸೂಚಿಯಂತಿರುವುದಿಲ್ಲ | | |
| 162 | ರಾಯಚೂರು | ರಾಮಣ್ಣ @ ರಾಮಪ್ಪ ತಂ/ ಚಂದ್ರಾಮಪ್ಪ ಸಾ॥ ಬೆನಕಲ್ ದೇವದುರ್ಗ | 18.11.2018 | 35/ಅ ಬೆನಕಲ್ ಗ್ರಾಮದಲ್ಲಿ 21.16 ಗುಂಟೆ ಮೃತರ ರೈತರ ತಂದೆ ಮತ್ತು ಸಹೋದರ ಜಂಟಿ ಖಾತೆಯಲ್ಲಿ ಇರುತ್ತದೆ | ಪಹಣಿಯಲ್ಲಿ ನಮೂದಿಸಿರುವಂತೆ ಎಕ್ಸಿಕ್ ಬ್ಯಾಂಕ್ ದೇವದುರ್ಗದಲ್ಲಿ 10.00 ಲಕ್ಷ ಜಂಟಿ ಸಾಲವಿದೆ | - | - | - | - | ಪೋಸ್ಟ್‌ಮಾರ್ಟಮ್ ರಿಪೋರ್ಟ್ ಮತ್ತು ಬಾಂಕಿನಲ್ಲಿ ಸಾಲ ಇರುವಬಗ್ಗೆ ದಾಖಲೆಗೆ ಬಾಕಿ |
| 163 | ರಾಯಚೂರು | ಹನುಮಂತರಾಯ ತಂ. ಬಸಪ್ಪ ಸಾ॥ ಜಾಲವಾಡಗಿ ಹೋ॥ ಬಳಗಾನೂರು ತಾ॥ ಸಿಂಧನೂರು | 25/06/2018 | ಮೃತನ ರೈತರ ತಂದೆಯ ಹೆಸರಲ್ಲಿ ಜಾಲವಾಡಗಿ ಗ್ರಾಮದ ಸರ್ವೆ ನಂ 50 ರಲ್ಲಿ 4.19 ಎ.ಗು & ಬುದ್ದಿನ್ನಿ ಗ್ರಾಮದ ಸ.ನಂ. 34ರಲ್ಲಿ 2.05 | ಖಾಸಗಿ ಸಾಲ ಪಡೆದಿರುತ್ತಾರೆ. | 11.09.2018 | - | ಖಾಸಗಿ ಸಾಲ ಪಡೆದಿರುವುದರಿಂದ ಮೃತ ರೈತರ ಮೇಲೆ ಯಾವುದೇ ಅಧಿಕೃತ ಸಾಲ ಇರುವುದಿಲ್ಲ | - | - |
| 164 | ಮೈಸೂರು | ಉಮೇಶ ಬಿನ್ ರಾಮೇಗೌಡ ಬೋರೆಕೊಪ್ಪಲು ಗ್ರಾಮ, ತಮ್ಮಡಹಳ್ಳಿ ಅಂಚೆ, ಬೆಟ್ಟದಮರ ಹೋಬಳಿ, ಪಿರಿಯಾಪಟ್ಟಣ ತಾಲ್ಲೂಕು | ಪಿರಿಯಾಪಟ್ಟಣ ತಾಲ್ಲೂಕು | 16.06.2018 | ಮೃತನ ಅಣ್ಣನ ಹೆಸರಿನಲ್ಲಿ ಸರ್ವೆ ನಂ145/2 ರಲ್ಲಿ 0.37 ಗುಂಟೆ ಸರ್ವೆ ನಂ 145/3 ರಲ್ಲಿ 1.23 ಎಕರೆ | 4.50 | 28/09/2018 | - | ಮೃತನ ಹೆಸರಿನಲ್ಲಿ ಯಾವುದೇ ಆರ್.ಟಿ.ಸಿ ವರದಿ ಹಾಗೂ ಸಾಲದ ವರದಿ ಇರುವುದಿಲ್ಲ ಮೃತನ ಸಾವು ಸಂಶಯಾಸ್ಪದವಾಗಿದ್ದು ತಿರಸ್ಕರಿಸಲಾಗಿದೆ | - |

| ಕ್ರಸಂ | ಜಿಲ್ಲೆ | ರೈತರ ಹೆಸರು ಮತ್ತು ವಿಳಾಸ | ಮರಣದ ದಿನಾಂಕ | ಸರ್ವೆ ನಂ ಮತ್ತು ವಿಸ್ತೀರ್ಣ(ಎ.ಗುಂಟೆ) | ' ಸಾಲದ ವಿವರ | ಸಮಿತಿಯಲ್ಲಿ ಮಂಡಿಸಿದ ದಿನಾಂಕ | ಸಮಿತಿಯಲ್ಲಿ ಅರ್ಹ ಪ್ರಕರಣವೆಂದು ತೀರ್ಮಾನಿಸಿದ್ದು ಪರಿಹಾರ ವನ್ನು ನೀಡದಿರುವುದು | ಸಮಿತಿಯಲ್ಲಿ ತಿರಸ್ಕರಿಸಿದ್ದು ಮತ್ತು ತಿರಸ್ಕರಿಸಲು ಕಾರಣಗಳು | ಸಮಿತಿಯಲ್ಲಿ ತೀರ್ಮಾನಿಸಲು ಬಾಕಿ ಇರುವ ಪ್ರಕರಣ | |
|---|---|---|---|---|---|---|---|---|---|---|
| | | | | | | | | | ಎಫ್ ಎಸ್ ಎಲ್ ವರದಿಗಾಗಿ ಮತ್ತು UDR No. | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 165 | ಮೈಸೂರು | ಆದರ್ಶ.ಸಿ.ಆರ್ ಬಿನ್ ರಮೇಶ.ಸಿ.ಎಸ್ ಚಪ್ಪರದಹಳ್ಳಿ ಗ್ರಾಮ, ಹಾರನಹಳ್ಳಿ ಹೋಬಳಿ, ಪಿರಿಯಾಪಟ್ಟಣ ತಾಲ್ಲೂಕು | ಪಿರಿಯಾಪಟ್ಟಣ ತಾಲ್ಲೂಕು | 18.06.2018 | ಮೃತನ ತಂದೆಯ ಹೆಸರಿನಲ್ಲಿ<br>ಸರ್ವೆ ನಂ 29/3 ರಲ್ಲಿ 1.14 ಎಕರೆ<br>ಸರ್ವೆ ನಂ 89/15 ರಲ್ಲಿ 0.21 ಗುಂಟೆ<br>ಸರ್ವೆ ನಂ 7/38 ರಲ್ಲಿ 0.03 ಗುಂಟೆ<br>ಸರ್ವೆ ನಂ 6/19 ರಲ್ಲಿ 1.00 ಎಕರೆ | 4.00 | 28/09/2018 | - | ಮೃತನ ಹೆಸರಿನಲ್ಲಿ ಯಾವುದೇ ಆರ್.ಟಿ.ಸಿ ವರದಿ ಹಾಗೂ ಸಾಲದ ವರದಿ ಇರುವುದಿಲ್ಲ ಮೃತನ ಸಾವು ಸಂಶಯಾಸ್ಪದವಾಗಿದ್ದು ತಿರಸ್ಕರಿಸಲಾಗಿದೆ | - |
| 166 | ಮೈಸೂರು | ಶಿವರಾಜು ಬಿನ್ ನಾಗೇಗೌಡ ಪಿ.ಜಿ.ಕೊಪ್ಪಲು ಗ್ರಾಮ, ಬೆಟ್ಟದಪುರ ಹೋಬಳಿ, ಪಿರಿಯಾಪಟ್ಟಣ ತಾಲ್ಲೂಕು | ಪಿರಿಯಾಪಟ್ಟಣ ತಾಲ್ಲೂಕು | 03.07.2018 | ಮೃತನ ತಾಯಿಯ ಹೆಸರಿನಲ್ಲಿ ಜಂಟಿ ಖಾತೆ<br>ಸರ್ವೆ ನಂ39/5ರಲ್ಲಿ 0.11 ಗುಂಟೆ<br>ಸರ್ವೆ ನಂ53/15ರಲ್ಲಿ 0.17 ಗುಂಟೆ<br>ಸರ್ವೆ ನಂ54/22ರಲ್ಲಿ 0.34 ಗುಂಟೆ<br>ಸರ್ವೆ ನಂ54/19ರಲ್ಲಿ 0.08 ಗುಂಟೆ<br>ಸರ್ವೆ ನಂ68/2ರಲ್ಲಿ 0.08 ಗುಂಟೆ | 1.30 | 28/09/2018 | - | ಮೃತನ ಹೆಸರಿನಲ್ಲಿ ಯಾವುದೇ ಆರ್.ಟಿ.ಸಿ ವರದಿ ಹಾಗೂ ಸಾಲದ ವರದಿ ಇರುವುದಿಲ್ಲ ಮೃತನ ಸಾವು ಸಂಶಯಾಸ್ಪದವಾಗಿದ್ದು ತಿರಸ್ಕರಿಸಲಾಗಿದೆ | - |
| 167 | ಮೈಸೂರು | ಎಸ್ ಬಿ ಶ್ರೀಧರ ಬಿನ್ ಲೇಟ್ ಎಸ್ ಬಿ ಬಲರಾಮೇಗೌಡ ಸಂಗರಶೆಟ್ಟಿಹಳ್ಳಿ ಗ್ರಾಮ, ಬೆಟ್ಟದಪುರ ಹೋಬಳಿ, ಪಿರಿಯಾಪಟ್ಟಣ ತಾಲ್ಲೂಕು | ಪಿರಿಯಾಪಟ್ಟಣ ತಾಲ್ಲೂಕು | 05.06.2018 | ಮೃತನ ತಂದೆಯ ಹೆಸರಿನಲ್ಲಿ<br>ಸರ್ವೆ ನಂ 7 ರಲ್ಲಿ 2.33 ಎಕರೆ | 1.10 | 28/09/2018 | - | ಮೃತನ ಹೆಸರಿನಲ್ಲಿ ಯಾವುದೇ ಆರ್.ಟಿ.ಸಿ ವರದಿ ಹಾಗೂ ಸಾಲದ ವರದಿ ಇರುವುದಿಲ್ಲ ಮೃತನ ಸಾವು ಸಂಶಯಾಸ್ಪದವಾಗಿದ್ದು ತಿರಸ್ಕರಿಸಲಾಗಿದೆ | - |
| 168 | ಮೈಸೂರು | ರಮೇಶ ಬಿನ್ ಲೇಟ್ ತಮ್ಮಯ್ಯಶೆಟ್ಟಿ ಹಮ್ಮಿಗೆ ಗ್ರಾಮ, ರಾವಂದೂರು ಹೋಬಳಿ, ಪಿರಿಯಾಪಟ್ಟಣ ತಾಲ್ಲೂಕು | ಪಿರಿಯಾಪಟ್ಟಣ ತಾಲ್ಲೂಕು | 19.08.2018 | ಮೃತನ ಹೆಸರಿನಲ್ಲಿ<br>ಸರ್ವೆ ನಂ 68/3 ರಲ್ಲಿ 1.21 ಎಕರೆ<br>ಜಂಟಿ ಖಾತೆ<br>ಸರ್ವೆ ನಂ 88/3 ರಲ್ಲಿ0.20 ಗುಂಟೆ<br>ಜಂಟಿ ಖಾತೆ<br>ಸರ್ವೆ ನಂ 88/5 ರಲ್ಲಿ0.22 ಗುಂಟೆ | 1.60 | 28/09/2018 | - | ವ್ಯವಸಾಯ ಮಾಡಲು ಬ್ಯಾಂಕಿನಲ್ಲಿ ಸಾಲವನ್ನು ಹೊಂದಿದ್ದು, ಬ್ಯಾಂಕಿನ ಸಾಲದ ವರದಿಯನ್ನು ಪರಿಶೀಲಿಸಿದಾಗ ಮೃತನು ಸಾಯುವ 5 ತಿಂಗಳ ಹಿಂದೆ ಸಾಲ ಪಡೆದಿದ್ದು ಸಾಲ ತೀರಿಸಲು ಕಾಲಾವಕಾಶವಿರುತ್ತದೆ. ಬ್ಯಾಂಕ್ ನಿಂದ ಯಾವುದೇ ನೋಟೀಸ್ ಹಾಗೂ ಯಾವುದೇ ವರದಿ ನೀಡದಿರುವುದರಿಂದ ಪ್ರಕರಣವನ್ನು ತಿರಸ್ಕರಿಸಿದೆ. | - |
| 169 | ಮೈಸೂರು | ವಸಂತ ಬಿನ್ ಲೇಟ್ ಕಾಳಜಯ್ಯ ಚಿಕ್ಕಮರಹಳ್ಳಿ ಗ್ರಾಮ, ಹಾರನಹಳ್ಳಿ ಹೋಬಳಿ, ಪಿರಿಯಾಪಟ್ಟಣ ತಾಲ್ಲೂಕು | ಪಿರಿಯಾಪಟ್ಟಣ ತಾಲ್ಲೂಕು | 15.09.2018 | ಮೃತನ ತಾಯಿಯ ಹೆಸರಿನಲ್ಲಿ<br>ಸರ್ವೆ ನಂ 50/2ಬಿ ರಲ್ಲಿ 1.10 ಎಕರೆ | 1.00 | 28/09/2018 | - | ಮೃತನ ಹೆಸರಿನಲ್ಲಿ ಜಮೀನು ಹಾಗೂ ಬ್ಯಾಂಕಿನಿಂದ ಯಾವುದೇ ಸಾಲ ಇರುವುದಿಲ್ಲ ಹಾಗೂ ಮೃತರ ತಾಯಿಯ ಹೆಸರಿನಲ್ಲಿ ಕಡಿಮೆ ಸಾಲವಿದ್ದು 6 ಜನ ಗಂಡು ಮಕ್ಕಳಿರುತ್ತಾರೆ ಎಲ್ಲರ ಮೇಲು ಸಾಲ ತೀರಿಸುವ ಹೊಣೆಯಿದ್ದು ಪರಿಹಾರ ವಿತರಿಸಲು ಅರ್ಹ ಪ್ರಕರವೆಂದು ಪರಿಗಣಿಸಲು ಸಾಧ್ಯವಿಲ್ಲವೆಂದು ತಿರಸ್ಕರಿಸಿದೆ | - |
| 170 | ಮೈಸೂರು | ಸ್ವಾಮಿನಾಯಕ ಬಿನ್ ಲೇಟ್ ಪಿವರಪ್ಪನಾಯಕ ಆಲನಹಳ್ಳಿ ಗ್ರಾಮ, ಕಸಬಾ ಹೋಬಳಿ, ಪಿರಿಯಾಪಟ್ಟಣ ತಾಲ್ಲೂಕು | ಪಿರಿಯಾಪಟ್ಟಣ ತಾಲ್ಲೂಕು | 10.09.2018 | ಮೃತನ ಹೆಸರಿನಲ್ಲಿ<br>ಸರ್ವೆ ನಂ 170/5ರಲ್ಲಿ 0.18 ಗುಂಟೆ<br>ಸರ್ವೆ ನಂ 170/1ರಲ್ಲಿ 0.06 ಗುಂಟೆ | 1.00 | 23/11/2018 | - | ಮೃತನ ಹೆಸರಿನಲ್ಲಿ ಜಮೀನು ಮತ್ತು ಸಾಲವು ಕಡಿಮೆ ಇದ್ದು, ಸಾಲವನ್ನು ತೀರಿಸಲು ಬ್ಯಾಂಕಿನಿಂದ ಯಾವುದೇ ನೋಟೀಸ್ ನೀಡದ ಕಾರಣ ಮೃತರಿಗೆ ಹೆಚ್ಚು ಒತ್ತಡ ಇಲ್ಲದಿರುವುದರಿಂದ ಮೃತನ ಸಾವು ಸಂಶಯಾಸ್ಪದವಾಗಿದ್ದು ಸದರಿ ಪ್ರಕರಣವನ್ನು ತಿರಸ್ಕರಿಸಿದೆ | - |

| ಕ್ರಸಂ | ಜಿಲ್ಲೆ | ರೈತರ ಹೆಸರು ಮತ್ತು ವಿಳಾಸ | ಮರಣದ ದಿನಾಂಕ | ಸರ್ವೇ ನಂ ಮತ್ತು ವಿಸ್ತೀರ್ಣ(ಎ.ಗುಂಟೆ) | ' ಸಾಲದ ವಿವರ | ಸಮಿತಿಯಲ್ಲಿ ಮಂಡಿಸಿದ ದಿನಾಂಕ | ಸಮಿತಿಯಲ್ಲಿ ಅರ್ಹ ಪ್ರಕರಣವೆಂದು ತೀರ್ಮಾನಿಸಿದ್ದು ಪರಿಹಾರ ವನ್ನು ನೀಡದಿರುವುದು | ಸಮಿತಿಯಲ್ಲಿ ತಿರಸ್ಕರಿಸಿದ್ದು ಮತ್ತು ತಿರಸ್ಕರಿಸಲು ಕಾರಣಗಳು | ಸಮಿತಿಯಲ್ಲಿ ತೀರ್ಮಾನಿಸಲು ಬಾಕಿ ಇರುವ ಪ್ರಕರಣ | |
|---|---|---|---|---|---|---|---|---|---|---|
| | | | | | | | | | ಎಫ್ ಎಸ್ ಎಲ್ ವರದಿಗಾಗಿ ಮತ್ತು UDR No. | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 171 | ಮೈಸೂರು | ಕರೀಗೌಡ ಬಿನ್ ಮರಿಯಯ್ಯ, ಸಿದ್ದರಾಮನಹುಂಡಿ ವರುಣಾ ಹೋಬಳಿ, ಮೈಸೂರು ತಾಲ್ಲೂಕು | ಮೈಸೂರು ತಾಲ್ಲೂಕು | 11.09.2018 | 5.03 | 5.03 | 17/11/2018 | ಪರಿಹಾರ ವಿತರಿಸಬೇಕಾಗಿದೆ. | ಶಿಫಾರಸ್ಸು ಮಾಡಿದೆ | - |
| 172 | ಮೈಸೂರು | ಕೆ.ಸಿ.ಶಿವಣ್ಣ ಬಿನ್ ಚಿಕ್ಕಸಿದ್ದೇಗೌಡ, ಕೆಂಪಿಸಿದ್ದನಹುಂಡಿ, ಚಿಕ್ಕಯ್ಯನಛತ್ರ | ನಂಜನಗೂಡು ತಾಲ್ಲೂಕು | 26/08/2018 | 4-20 | 3.6 | 27/10/2018 | ಪರಿಹಾರ ವಿತರಿಸಬೇಕಾಗಿದೆ. | ಶಿಫಾರಸ್ಸು ಮಾಡಿದೆ | - |
| 173 | ಮೈಸೂರು | ಶಿವಣ್ಣ ಬಿನ್ ಮರೀಗೌಡ, ಗೊದ್ದನಪುರ, ಚಿಕ್ಕಯ್ಯನಛತ್ರ | ನಂಜನಗೂಡು ತಾಲ್ಲೂಕು | 27/08/2018 | 3-00 | 3.5 | 05/12/2018 | ಪರಿಹಾರ ವಿತರಿಸಬೇಕಾಗಿದೆ. | ಶಿಫಾರಸ್ಸು ಮಾಡಿದೆ | - |
| 174 | ಮೈಸೂರು | ಕೃಷ್ಣ ಬಿನ್ ಸಿದ್ದು, ಕೆಂಪಿಸಿದ್ದನಹುಂಡಿ, ಚಿಕ್ಕಯ್ಯನಛತ್ರ | ನಂಜನಗೂಡು ತಾಲ್ಲೂಕು | 16/09/2018 | 2-12 | 2.75 | ಪೂರ್ಣ ದಾಖಲಾತಿ ಲಭ್ಯವಿರುವುದಿಲ್ಲ | | | |
| 175 | ಮೈಸೂರು | ವಸಂತ್ ಕುಮಾರ್ ಬಿನ್ ಲೇ ಸಿದ್ದೇಗೌಡ, ತಟ್ಟೆಕೆರೆ, ಹನಗೂಡು, ಹೋಬಳಿ, ಹುಣಸೂರು ತಾಲ್ಲೂಕು. (ಅರ್ಜಿ ದಾರರು ಮೃತರ ಪತ್ನಿ ಕುಸುಮ, ಇವರಿಗೆ ಒಬ್ಬನೆ ಮಗ ತೊಸಿತ್ ಇರುತ್ತಾನೆ) | ಹುಣಸೂರು ತಾಲ್ಲೂಕು | 20.07.2018 (ಔಷಧಿ) | ಮೃತ ವಸಂತ ಕುಮಾರ್ ರವರ ಹೆಸರಿನಲ್ಲಿ 3.10 ಎಕರೆ ಜಮೀನಿರುತ್ತದೆ | ಎಸ್.ಬಿ.ಐ(ಎ.ಡಿ.ಬಿ) ಬ್ಯಾಂಕ್ ಹುಣಸೂರು ಶಾಖೆಯಲ್ಲಿ ವ್ಯವಸಾಯ ಸಾಲ ರೂ 3.75 ಲಕ್ಷ, ಹಾಗೂ ಕೈಸಾಲ 2.00 ಲಕ್ಷ ಇರುತ್ತದೆ | 28/09/2018 | - | ಮೃತ ವಸಂತ ಕುಮಾರ್ ರವರ ಹೆಸರಿನಲ್ಲಿ 3.10 ಎಕರೆ ಜಮೀನಿರುತ್ತದೆ. ಸಮಿತಿಯಲ್ಲಿ ತಿರಸ್ಕರಿಸಿದೆ | - |
| 176 | ಮೈಸೂರು | ಪುಟ್ಟಸ್ವಾಮಿಗೌಡ ಬಿನ್ ಕರೀಗೌಡ, ಮೂಡಲ ಕೊಪ್ಪಲು, ಕಸಬಾ ಹೋಬಳಿ, ಹುಣಸೂರು ತಾಲ್ಲೂಕು, (ಅರ್ಜಿ ದಾರರು ಮಂಜುನಾಥ. ಎಂ.ಪಿ.) | ಹುಣಸೂರು ತಾಲ್ಲೂಕು | 27.08.2018 (ಔಷಧಿ) | ಮೃತ ಪುಟ್ಟಸ್ವಾಮಿಗೌಡ ರವರ ಹೆಸರಿನಲ್ಲಿ 4.13 ಎಕರೆ ಜಮೀನಿರುತ್ತದೆ | 10 | 23/11/2018 | ಪರಿಹಾರ ವಿತರಿಸಬೇಕಾಗಿದೆ. | ಶಿಫಾರಸ್ಸು ಮಾಡಿದೆ | - |
| 177 | ಮೈಸೂರು | ಸ್ವಾಮಿಗೌಡ ಬಿನ್ ಲೇ ಕೆಂಪೇಗೌಡ ಹೀರತ್ತಯ್ಯನ ಕೊಪ್ಪಲು, ಹನಗೂಡು ಹೋ, ಹುಣಸೂರು ತಾ | ಹುಣಸೂರು ತಾಲ್ಲೂಕು | 19-10-2018 (ಔಷಧಿ) | ಸರ್ವೆ ನಂ 13, ರಲ್ಲಿ 2.00 ಎಕರೆ ಜಮೀನಿರುತ್ತದೆ | ಎಸ್.ಬಿ.ಐ ಗುರುಪುರ ಬ್ಯಾಂಕ್ ಹುಣಸೂರು ಶಾಖೆಯಲ್ಲಿ ವ್ಯವಸಾಯ ಸಾಲ ರೂ 3.40 ಲಕ್ಷ, ಲಕ್ಷ ಇರುತ್ತದೆ | ಸಮಿತಿಯಲ್ಲಿ ಮಂಡಿಸಲು ಬಾಕಿ ಇದೆ | - | ತೀರ್ಮಾನಿಸಲು ಬಾಕಿ ಪ್ರಕರಣ | ಹೌದು |
| 178 | ಮೈಸೂರು | ಸೋಮೇಶ ಬಿನ್ ಮಾಕೇಗೌಡ ಹೊನ್ನಿಕುಪ್ಪೆ ಗ್ರಾಮ | ಹುಣಸೂರು ತಾಲ್ಲೂಕು | 19.10.2018 | 2.30 ಎಕರೆ | 5.00 ಲಕ್ಷ | 23/11/2018 | ಪರಿಹಾರ ವಿತರಿಸಬೇಕಾಗಿದೆ. | ಶಿಫಾರಸ್ಸು ಮಾಡಿದೆ | - |
| 179 | ಮೈಸೂರು | ಶಿವಪ್ಪ ಬಿನ್ ದೇವಯ್ಯ, ಅಡಿಗನಹಳ್ಳಿ, ಹನಗೂಡು ಹೋಬಳಿ, .(ಅರ್ಜಿದಾರರು ಮೃತರ ಹೆಂಡತಿ ದೀಪಿಕಾ) | ಹುಣಸೂರು ತಾಲ್ಲೂಕು | 11.11.2018 (ಕೆರೆಗೆ ಹಾರಿ) | 2 | 3.85 | 28/09/2018 | - | - | - |
| 180 | ಮೈಸೂರು | ವಿಜಯ ಕುಮಾರ್ ಬಿನ್ ಕರೀಗೌಡ ಹೊನ್ನೇನಹಳ್ಳಿ ಗ್ರಾಮ, ಗಾವಡಗೆರೆ ಹೋಬಳಿ, ಹುಣಸೂರು ತಾಲ್ಲೂಕು.(ಅರ್ಜಿದಾರರು ಮೃತರ ಪತ್ನಿ ವೀಣಾ) | ಹುಣಸೂರು ತಾಲ್ಲೂಕು | 12.11.2018 (ಬಾವಿಗೆ ಬಿದ್ದು) | 3.24 | 3.5 | 28/09/2018 | - | - | - |
| 181 | ಮೈಸೂರು | ಹೆಚ್.ಎಸ್. ರಾಜು ಬಿನ್ ಲೇ ಶಿವಲಿಂಗಪ್ಪ, ಹರವೆ ಗ್ರಾಮ, ಗಾವಡಗೆರೆ ಹೋಬಳಿ, ಹುಣಸೂರು ತಾಲ್ಲೂಕು (ಅರ್ಜಿದಾರರು ಮೃತರ ಪತ್ನಿ ಅಮ್ಮಣ್ಣಮ್ಮ 50 ವರ್ಷ ಮೊ.8861913536) | ಹುಣಸೂರು ತಾಲ್ಲೂಕು | 19.11.208 (ಔಷಧಿ) | | 3.35 | 28/09/2018 | - | - | - |

| ಕ್ರಸಂ | ಜಿಲ್ಲೆ | ರೈತರ ಹೆಸರು ಮತ್ತು ವಿಳಾಸ | ಮರಣದ ದಿನಾಂಕ | ಸರ್ವೇ ನಂ ಮತ್ತು ವಿಸ್ತೀರ್ಣ(ಎ.ಗುಂಟೆ) | ಸಾಲದ ವಿವರ | ಸಮಿತಿಯಲ್ಲಿ ಮಂಡಿಸಿದ ದಿನಾಂಕ | ಸಮಿತಿಯಲ್ಲಿ ಅರ್ಹ ಪ್ರಕರಣವೆಂದು ತೀರ್ಮಾನಿಸಿದ್ದು ಪರಿಹಾರ ವನ್ನು ನೀಡದಿರುವುದು | ಸಮಿತಿಯಲ್ಲಿ ತಿರಸ್ಕರಿಸಿದ್ದು ಮತ್ತು ತಿರಸ್ಕರಿಸಲು ಕಾರಣಗಳು | ಸಮಿತಿಯಲ್ಲಿ ತೀರ್ಮಾನಿಸಲು ಬಾಕಿ ಇರುವ ಪ್ರಕರಣ | |
|---|---|---|---|---|---|---|---|---|---|---|
| | | | | | | | | | ಎಫ್ ಎಸ್ ಎಲ್ ವರದಿಗಾಗಿ ಮತ್ತು UDR No. | ಇತರೆ ದಾಖಲಾತಿಗಳ ಸಂಗ್ರಹಣೆಗಾಗಿ |
| 182 | ಮೈಸೂರು | ರಾಮೇಗೌಡ ಬಿನ್ ಲೇ ವೆಂಕಟರಮಣೇಗೌಡ, ದೊಡ್ಡೇಗೌಡನ ಕೊಪ್ಪಲು ಗ್ರಾಮ, ಕಸಬಾ ಹೋಬಳಿ, ಹುಣಸೂರು ತಾಲ್ಲೂಕು.(ಅರ್ಜಿದಾರರು ಮೃತರ ಪತ್ನಿ ನಿಂಗಮ್ಮ, ಮೊ.ನಂ. 8722375519(70 ವರ್ಷ) | ಹುಣಸೂರು ತಾಲ್ಲೂಕು | 19.11.2018 (ಕೆರೆಗೆ ಹಾರಿ) | 4.37 | 10 | 28/09/2018 | - | - | - |
| 183 | ಮೈಸೂರು | ಮಂಜೇಗೌಡ ಬಿನ್ ಸಿದ್ದೇಗೌಡ, ಕಣಗಾಲು. ಹುನುಗನಹಳ್ಳಿ, ಹನಗೂಡು ಹೋಬಳಿ, ಹುಣಸೂರು ತ್ತಾಲ್ಲೂಕು.(ಅರ್ಜಿದಾರರು ಮೃತರ ಹೆಂಡತಿ ಶಿಲ್ಪಾ) | ಹುಣಸೂರು ತಾಲ್ಲೂಕು | 30.07.2018 (ಔಷಧಿ) | ಮೃತರ ತಂದೆಯ ಹೆಸರಿನಲ್ಲಿ 5.20 ಎಕರೆ ಜಮೀನಿರುತ್ತದೆ | ಮೃತರ ತಂದೆಯ ಹೆಸರಿನಲ್ಲಿ ಕೆ.ಜಿ.ಬಿ . ಪಿರಿಯಾಪಟ್ಟಣ ಶಾಖೆಯಲ್ಲಿ ಬೆಳೆಸಾಲ ರೂ 5.48, ತಂಬಾಕು ಬ್ಯಾರಲ್ ಸಾಲ ರೂ 0.816 ಲಕ್ಷ ಕೃಷಿ ಗಾಗಿ ವಯಕ್ತಿಕ ಸಾಲ 0.845 ತಂಬಾಕು ಹುರುವಲು ಸಾಲ 0.451 ಕಿಸಾನ್ ಗೋಲ್ಡಕಾರ್ಡ ನಲ್ಲಿ 1.77 ಲಕ್ಷ ಸಾಲಇರುವುದಾಗಿ ತಿಳಿಸಿರುತ್ತಾರೆ | ಸಮಿತಿಯಲ್ಲಿ ಮಂಡಿಸಲು ಬಾಕಿ ಇದೆ | - | - | - |
| 184 | ಮೈಸೂರು | ಸೋಮಶೇಖರ ಬಿನ್ ಲೇ ಅಣ್ಣಾಜಪ್ಪ ಹಾಡ್ಯ ಗ್ರಾಮ. ಚುಂಚನಕಟ್ಟೆ ಹೋಬಳಿ, ಕೆ.ಆರ್ ನಗರ ತಾಲ್ಲೂಕು. ಯು.ಡಿ.ಆರ್. 37/2018 | ಕೆ.ಆರ್ ನಗರ ತಾಲ್ಲೂಕು. | 26/07/2018 | 2.19 | 90000<br>1.00000 | 23/11/2018 | - | ಸಾಲ ಪಡೆದ ಕೇವಲ 5 ತಿಂಗಳ ಅವಧಿಯಲ್ಲಿ ಆತ್ಮಹತ್ಯೆ ಮಾಡಿಕೊಂಡಿದ್ದು, ಸಾಲ ತೀರಿಸಲು ಕಾಲಾವಕಾಶ ಇರುವ ಹಿನ್ನಲೆಯಲ್ಲಿ ಪ್ರಕರಣವನ್ನು ತಿರಸ್ಕರಿಸಲಾಯಿತು. | - |
| 185 | ಮೈಸೂರು | ಕುಮಾರ್ ಬಿನ್ ಲೇ। ಶಿವಪ್ಪ, ಹೊನ್ನೇನಹಳ್ಳಿ ಗ್ರಾಮ, ಸಾಲಿಗ್ರಾಮ ಹೋಬಳಿ, ಕೆ.ಆರ್ ನಗರ ತಾಲ್ಲೂಕು. ಯು.ಡಿ.ಆರ್. 0015/2018 | ಕೆ.ಆರ್ ನಗರ ತಾಲ್ಲೂಕು. | 27/06/2018 | 2.00 | 5.58921 | 28/09/2018 | ಪರಿಹಾರ ವಿತರಿಸಬೇಕಾಗಿದೆ. | ಅಂಗೀಕರಿಸಿದೆ, ಪರಿಹಾರ ಧನ ನೀಡಬೇಕಾಗಿದೆ | - |
| 186 | ಮೈಸೂರು | ರಮೇಶ್ ಬಿನ್ ರಾಮಕೃಷ್ಣೇಗೌಡ ಹೆಬ್ಬಾಳು ಗ್ರಾಮ ಹೆಬ್ಬಾಳು ಹೋಬಳಿ, ಕೆ.ಆರ್ ನಗರ ತಾಲ್ಲೂಕು. ಯು.ಡಿ.ಆರ್. 0031/2018 | ಕೆ.ಆರ್ ನಗರ ತಾಲ್ಲೂಕು. | 03/07/2018 | 1.28 | 0.7 | 23/11/2018 | ಪರಿಹಾರ ವಿತರಿಸಬೇಕಾಗಿದೆ. | ಅಂಗೀಕರಿಸಿದೆ, ಪರಿಹಾರ ಧನ ನೀಡಬೇಕಾಗಿದೆ | - |
| 187 | ಮೈಸೂರು | ಪುಟ್ಟಮಾದೇಗೌಡ ಬಿನ್ ಲೇ. ಜವರೇಗೌಡ, ಅರಕೆರೆ ಕೊಪ್ಪಲು ಗ್ರಾಮ. ಸಾಲಿಗ್ರಾಮ ಹೋಬಳಿ. ಕೆ.ಆರ್ ನಗರ ತಾಲ್ಲೂಕು. ಯು.ಡಿ.ಆರ್. 0035/2018 | ಕೆ.ಆರ್ ನಗರ ತಾಲ್ಲೂಕು. | 18/07/2018 | 3.2 | 1.00000<br>1.50000<br>20000 | 23/11/2018 | - | ಮೃತರ ಮಗನ ಹೆಸರಿನಲ್ಲಿ ಪಡೆದಿರುವ ಒಡವೆ ಸಾಲವು ಕೃಷಿಗೆ ಎಂದು ದೃಢಪಟ್ಟಿರುವುದಿಲ್ಲ. ಹಾಗೂ ಮೃತರ ಹೆಸರಿನಲ್ಲಿ ಪಡೆದಿರುವ ಬೆಳೆ ಸಾಲವು ಸಾಲ ಮನ್ನಾ ವ್ಯಾಪ್ತಿಗೆ ಒಳಪಟ್ಟಿರುವುದರಿಂದ ಪ್ರಕರಣವನ್ನು ತಿರಸ್ಕರಿಸಲಾಯಿತು. | - |

ಕೃಷಿ ನಿರ್ದೇಶಕರು

## ಅನುಬಂಧ –3

## ರೈತರ ಆತ್ಮಹತ್ಯೆ ತಡೆಯಲು ಸರ್ಕಾರ ಕೈಗೊಂಡಿರುವ ಕ್ರಮಗಳು

ರೈತರ ಆತ್ಮಹತ್ಯೆ ಕುರಿತು ಅಧ್ಯಯನ ನಡೆಸಲು ಸರ್ಕಾರವು 2001 ರಲ್ಲಿ ಡಾ. ಜಿ.ಕೆ. ವೀರೇಶ್, ನಿವೃತ್ತ ಕುಲಪತಿಗಳು, ಕೃಷಿ ವಿಶ್ವ ವಿದ್ಯಾನಿಲಯ, ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿತ್ತು. ಸದರಿ ಸಮಿತಿಯು ರೈತರ ಆರ್ಥಿಕ ಪರಿಸ್ಥಿತಿ, ಸಾಮಾಜಿಕ ಮತ್ತು ಸಾಂಸಾರಿಕ ಸಮಸ್ಯೆಗಳು, ಸಾಮರ್ಥ್ಯಕ್ಕೆ ಮೀರಿ ಸಾಲ, ಬೆಳೆ ನಷ್ಟ ಇವೇ ಮುಂತಾದವು ರೈತರ ಆತ್ಮಹತ್ಯೆಗೆ ಕಾರಣಗಳಾಗಿರುತ್ತವೆಂದು ವರದಿ ನೀಡಿರುತ್ತದೆ.

ರೈತರ ಆತ್ಯಹತ್ಯೆಗಳನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿ, ರೈತರ ಶ್ರೇಯೋಭಿವೃದ್ಧಿಗಾಗಿ ಮತ್ತು ಅವರಲ್ಲಿ ಆತ್ಮಸ್ಥೈರ್ಯ ತುಂಬಲು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಾಗ್ಯೂ ಸಹ ರೈತರ ಆತ್ಮಹತ್ಯೆ ಪ್ರಕರಣಗಳು ವರದಿಯಾಗುತ್ತಿವೆ. ರೈತರ ಆತ್ಮಹತ್ಯೆ ತಡೆಯಲು ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿದೆ.

- ಸ್ಥಳೀಯ ಸಾಲಗಾರರಿಂದ ರೈತರ ಶೋಷಣೆ ತಡೆಯುವ ಕುರಿತು ಉಸ್ತುವಾರಿ / ನಿಗಾ ವಹಿಸಲು ಜಿಲ್ಲಾ ಮಟ್ಟದಲ್ಲಿ ಮತ್ತು ಉಪವಿಭಾಗ ಮಟ್ಟದಲ್ಲಿ ಸಮಿತಿಗಳನ್ನು ರಚಿಸಲಾಗಿದೆ. ಈ ಜಿಲ್ಲಾ ಮಟ್ಟದ / ಉಪವಿಭಾಗ ಮಟ್ಟದ ಸಮಿತಿಯಲ್ಲಿ ಕಂದಾಯ, ಪೋಲೀಸ್, ಕೃಷಿ, ತೋಟಗಾರಿಕೆ, ಸಹಕಾರ, ಪಶುಸಂಗೋಪನೆ ಇಲಾಖೆಯ ಅಧಿಕಾರಿಗಳು ಸದಸ್ಯರಿದ್ದು, ದುಬಾರಿ ಬಡ್ಡಿಯಿಂದ ಬಾಧಿತರಾದ ರೈತರನ್ನು ರಕ್ಷಿಸಲು ಕ್ರಮ ವಹಿಸಲಾಗಿದೆ.
- ರಾಜ್ಯದ ರೈತರು ಸಹಕಾರ ಸಂಘಗಳ ಮೂಲಕ ಅಲ್ಪಾವಧಿ ಬೆಳೆ ಸಾಲ ಪಡೆದು ದಿ.20–6–2017 ಕ್ಕೆ ಬಾಕಿ ಇರುವ ಮೊತ್ತದಲ್ಲಿ ಅಸಲು ಮತ್ತು ಬಡ್ಡಿ ಸೇರಿ ರೂ.50000/– ಗಳ ಸಾಲ ಮನ್ನಾ ಮಾಡಲಾಗಿದೆ.
- ಬೆಳೆ ವಿಮೆ:– ಕೇಂದ್ರ ಮತ್ತು ರಾಜ್ಯ ಸರ್ಕಾರದ ಸಹಭಾಗಿತ್ವದಲ್ಲಿ ಬೆಳೆ ವಿಮೆ ಯೊಜನೆಯನ್ನು ಜಾರಿಗೆ ತರಲಾಗಿದೆ. ವಿಮಾ ಕಂತಿನ ಶೇ. 95ರಿಂದ 98ರಷ್ಟು ಮೊತ್ತವನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ಪಾವತಿಸಲಾಗುತ್ತಿದೆ. ಇದರಿಂದಾಗಿ ಬೆಳೆನಷ್ಟ ಸಂಭವಿಸಿದರೂ ಸಹ ರೈತರಿಗೆ ಪರಿಹಾರ ದೊರೆಯುತ್ತದೆ.
- ಪ್ರಾಕೃತಿಕ ವಿಕೋಪಗಳಿಂದ ಬೆಳೆಹಾನಿ ಸಂಭವಿಸಿದಲ್ಲಿ, ರಾಷ್ಟ್ರ ಹಾಗೂ ರಾಜ್ಯ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ರೈತರಿಗೆ ಪರಿಹಾರ ನೀಡಲಾಗುತ್ತಿದೆ.
- ಕೃಷಿ ಆವರ್ತ ನಿಧಿ: ರೈತರು ಬೆಳೆದ ಕೃಷಿ ಉತ್ಪನ್ನಗಳಿಗೆ ಬೆಲೆ ಕುಸಿತವಾದಲ್ಲಿ ಮಾರುಕಟ್ಟೆ ಮಧ್ಯ ಪ್ರವೇಶಕ್ಕಾಗಿ ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಆವರ್ತ ನಿಧಿಯನ್ನು ನಿರ್ವಹಿಸಲಾಗುತ್ತಿದೆ.
- ಬೆಲೆ ಕುಸಿತ ಸಂಧರ್ಭದಲ್ಲಿ ಕೇಂದ್ರ ಸರ್ಕಾರವು ನೀಡುವ ಕನಿಷ್ಠ ಬೆಂಬಲ ಬೆಲೆ ಜೊತೆಗೆ ರಾಜ್ಯ ಸರ್ಕಾರವು ಪ್ರೋತ್ಸಾಹಧನವನ್ನು ಒದಗಿಸಿ ರೈತರಿಂದ, ಉತ್ಪನ್ನಗಳನ್ನು ಖರೀದಿ ಮಾಡುತ್ತಿದೆ. 2016–17 ಮತ್ತು 2017–18ನೇ ಸಾಲಿನಲ್ಲಿ ಕ್ರಮವಾಗಿ ಕೊಬ್ಬರಿ & ತೊಗರಿ ಬೆಳೆಗೆ ಮತ್ತು ರಾಗಿ & ಜೋಳದ ಬೆಳೆಗೆ ಸರ್ಕಾರವು ಕೇಂದ್ರ ಸರ್ಕಾರದ ಬೆಂಬಲ ಬೆಲೆಯ ಜೊತೆಗೆ ರಾಜ್ಯ ಸರ್ಕಾರದ ಪ್ರೋತ್ಸಾಹಧನವನ್ನು ನೀಡಿ ಖರೀದಿಸಲಾಗುತ್ತಿದೆ.
- ರೈತರಿಗೆ ನೇರವಾಗಿ ಸಹಕಾರ ಸಂಘಗಳಿಂದ ಸಾಲದ ನೆರವು: ಶೂನ್ಯ ಬಡ್ಡಿಯಲ್ಲಿ ರೂ. 3.00 ಲಕ್ಷದವರೆಗೆ ಮತ್ತು ಶೇ. 3ರ ಬಡ್ಡಿಯಲ್ಲಿ ರೂ. 10.00 ಲಕ್ಷದವರೆಗೆ ರೈತರಿಗೆ ಸಾಲ ನೀಡುವ ಕ್ರಮವನ್ನು ರಾಜ್ಯ ಸರ್ಕಾರವು 2014–15ನೇ ಸಾಲಿನಿಂದ ಕೈಗೊಂಡಿರುತ್ತದೆ.
- ರಾಜ್ಯದಲ್ಲಿ 2009–10ನೇ ಸಾಲಿನಿಂದ ಬೆಳೆ ಸಾಲಕ್ಕೆ ಸಹಾಯಧನ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದ್ದು, 2012–13ನೇ ಸಾಲಿನಿಂದ ಶೇ.1ರ ಬಡ್ಡಿ ರಿಯಾಯಿತಿ ಮಿತಿಯನ್ನು ರೂ. 50,000/– ದಿಂದ ರೂ. 1,00,000/–ದವರೆಗೆ ಹೆಚ್ಚಿಸಲಾಗಿರುತ್ತದೆ.
- ರಾಜ್ಯದಲ್ಲಿ ಮಳೆಯಾಶ್ರಿತ ರೈತ ಸಮುದಾಯದ ಜೀವನೋಪಾಯವನ್ನು ಉತ್ತಮಪಡಿಸಲು ಕೃಷಿ ಭಾಗ್ಯ ಯೋಜನೆಯನ್ನು ಜಾರಿಗೆ ತರಲಾಗಿದೆ. ಈ ಯೋಜನೆಯಲ್ಲಿ ಮಳೆ ನೀರಿನ ಸಂಗ್ರಹಣೆ, ಸಂರಕ್ಷಣೆ ಹಾಗೂ ಉಪಯುಕ್ತ ಬಳಕೆ, ಲಾಭದಾಯಕ ಬೆಳೆ ಪದ್ಧತಿ ಅಳವಡಿಕೆ, ಉತ್ತಮ ಆದಾಯ ತರುವ ತೋಟಗಾರಿಕೆ ಬೆಳೆಗಳು, ಪಶು ಸಂಗೋಪನಾ ಚಟುವಟಿಕೆಗಳು, ಕೃಷಿ ವಲಯಕ್ಕೆ ಸಂಬಂಧಿಸಿದ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೆ ಪ್ರೋತ್ಸಾಹ ನೀಡಲು ಉದ್ದೇಶಿಸಲಾಗಿದೆ. ಕೃಷಿ ಭಾಗ್ಯ ಯೋಜನೆಯನ್ನು ಅಭಿಯಾನ ಮಾದರಿಯಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ.
- ರಾಜ್ಯದಲ್ಲಿ ರೈತರ ಆದಾಯ ಹೆಚ್ಚಿಸುವ ಮತ್ತು ಆದಾಯದಲ್ಲಿ ಸ್ಥಿರತೆ ಹೆಚ್ಚಿಸಲು ಸಮಗ್ರ ಬೇಸಾಯ ಪದ್ದತಿಯನ್ನು ಅಳವಡಿಸಿಕೊಂಡು ಅವರ ಜೀವನಮಟ್ಟವನ್ನು ಸುಧಾರಿಸುವ ಸಲುವಾಗಿ ಭೂಸಮೃದ್ಧಿ ಮುಂತಾದ ಯೋಜನೆಗಳ ಮೂಲಕ ಸಮಗ್ರ ಬೇಸಾಯ ಪದ್ದತಿಯನ್ನು ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ(ನರೇಗಾ)

ಒಗ್ಗೂಡಿಸುವಿಕೆಯೊಂದಿಗೆ ಕೃಷಿ, ತೋಟಗಾರಿಕೆ, ಅರಣ್ಯ, ರೇಷ್ಮೇ ಕೃಷಿ, ಪಶುಸಂಗೊಪನೆ ಇಲಾಖೆಗಳು ಸಕ್ರೀಯವಾಗಿ ಪಾಲ್ಗೊಳ್ಳುವಿಕೆ ಮೂಲಕ ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

- ಸಕಾಲದಲ್ಲಿ ಕೃಷಿ ಕಾರ್ಯಗಳನ್ನು ಕೈಗೊಳ್ಳಲು ಅನುಕೂಲವಾಗುವಂತೆ ಸರ್ಕಾರದಿಂದ ಕೃಷಿ ಯಾಂತ್ರೀಕರಣ ಯೋಜನೆಯಡಿ ಸಾಮಾನ್ಯ ವರ್ಗದ ರೈತರಿಗೆ ಉಪಕರಣದ ಕನಿಷ್ಟ ದರದ ಶೇ.50 ರಷ್ಟು ರಿಯಾಯಿತಿ ಮತ್ತು ಪ.ಜಾ/ಪ.ಪಂ ವರ್ಗದ ರೈತರಿಗೆ ಶೇ.90 ರಷ್ಟು, ಗರಿಷ್ಠ ಮಿತಿ ರೂ. 1.00 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ. ಸಣ್ಣ ಟ್ರ್ಯಾಕ್ಟರ್‌ಗಳಿಗೆ ಸಾಮಾನ್ಯ ವರ್ಗದ ರೈತರಿಗೆ ರೂ.75,000/- ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತರಿಗೆ ರೂ.2.00ಲಕ್ಷ ಸಹಾಯಧನವನ್ನು ನೀಡಲಾಗುತ್ತಿದೆ.

- ರೈತರಿಗೆ ಸಕಾಲದಲ್ಲಿ ಕೃಷಿ ಯಂತ್ರೋಪಕರಣಗಳನ್ನು ಒದಗಿಸುವ ಸಲುವಾಗಿ ಪ್ರತಿ ಹೋಬಳಿ ಕೇಂದ್ರದಲ್ಲಿ ಕೃಷಿ ಯಂತ್ರೋಪಕರಣಗಳ ಬಾಡಿಗೆ ಆಧಾರಿತ ಸೇವಾ ಕೇಂದ್ರಗಳನ್ನು ನೊಂದಾಯಿತ ಚಾರಿಟಬಲ್ ಟ್ರಸ್ಟಗಳು/ ಸಂಘ ಸಂಸ್ಥೆಗಳು ಹಾಗೂ ಸರ್ಕಾರೇತರ ಸಂಸ್ಥೆಗಳ ಮೂಲಕ ಸ್ಥಾಪಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

- ಕೃಷಿಯಲ್ಲಿ ಯಂತ್ರೋಪಕರಣಗಳ ಬಳಕೆ ಉತ್ತೇಜಿಸಿ ಯುವ ರೈತರನ್ನು ಕೃಷಿಯತ್ತ ಗಮನ ಸೆಳೆದು ಉದ್ಯೋಗಾವಕಾಶ ಸೃಜಿಸಲು ಹಾಗೂ ಸ್ಥಳೀಯವಾಗಿ ಕೃಷಿ ಉಪಕರಣಗಳ ದುರಸ್ತಿಗಾಗಿ ಹಾಗೂ ಲಘು ಉಪಕರಣಗಳ ತಯಾರಿಕೆಗಾಗಿ "ಗ್ರಾಮೀಣ ಕೃಷಿ ಯಂತ್ರೋಪಕರಣ ದುರಸ್ತಿ ಸೇವಾ ಕೇಂದ್ರ ಸ್ಥಾಪನೆ ಮಾಡಲಾಗುತ್ತಿದೆ.

- ಕೃಷಿ ಮತ್ತು ಎಲ್ಲಾ ಅಭಿವೃದ್ಧಿ ಇಲಾಖೆಗಳಿಗೆ ಸಂಬಂಧಿಸಿದ ಯೋಜನೆಗಳ ಬಗ್ಗೆ ರೈತರಿಗೆ ಅರಿವು ಮೂಡಿಸಲು ಹಾಗೂ ತಾಂತ್ರಿಕತೆಗಳನ್ನು ವರ್ಗಾಯಿಸಲು ಒಂದು ಏಕ ಗವಾಕ್ಷಿ ವ್ಯವಸ್ಥೆಯಾಗಿ ಕೃಷಿ ಅಭಿಯಾನ ಯೋಜನೆಯನ್ನು ಮುಂಗಾರು 2015 ರಿಂದ ಅನುಷ್ಠಾನಗೊಳಿಸಲಾಗುತ್ತಿದೆ.

- ರಾಜ್ಯಾದ್ಯಂತ ಕೃಷಿ ಚಟುವಟಿಕೆಗಳಿಗೆ ಸಹಾಯವಾಗುವಂತೆ ಸೂಕ್ಷ್ಮ ನೀರಾವರಿ ಘಟಕಗಳನ್ನು ಕಡಿಮೆ ವೆಚ್ಚದಲ್ಲಿ ಎಲ್ಲಾ ವರ್ಗದ ರೈತರಿಗೆ ಅದರಲ್ಲೂ ಸಣ್ಣ ಮತ್ತು ಅತಿಸಣ್ಣ ರೈತರು ಶಕ್ತ ವೆಚ್ಚದಲ್ಲಿ ಪಡೆಯುವಂತೆ ಮಾಡಲು ಲಭ್ಯವಿರುವ ನೀರನ್ನು ಸಮರ್ಪಕವಾಗಿ ಬಳಸಿಕೊಳ್ಳಲು ಮತ್ತು ಹೆಚ್ಚಿನ ಉತ್ಪಾದನೆ ಹಾಗೂ ಉತ್ಪಾದಕತೆಯನ್ನು ಗಳಿಸಲು ರೈತರಿಗೆ ಹನಿ ನೀರಾವರಿ, ತುಂತುರು ನೀರಾವರಿ/ರೇನ್ ಗನ್ ಘಟಕಗಳ ಶೇ.90 ರಷ್ಟು ರಿಯಾಯಿತಿಯಲ್ಲಿ ವಿತರಣೆ ಮಾಡಲಾಗುತ್ತಿದೆ.

- ಸಾವಯವ ಕೃಷಿ ಉತ್ತೇಜಿಸಲು ರಾಜ್ಯ ಸರ್ಕಾರವು 2004-05ರಿಂದ ಸಾವಯವ ಕೃಷಿ ನೀತಿಯನ್ನು ಜಾರಿಗೆ ತಂದಿರುತ್ತದೆ. ಸಾವಯವ ಉತ್ಪನ್ನಗಳಿಗೆ ಮಾರುಕಟ್ಟೆ ಸಂಪರ್ಕ ಕಲ್ಪಿಸಲು ಹಾಗೂ ವ್ಯವಸ್ಥಿತ ಮಾರುಕಟ್ಟೆ ಅಭಿವೃದ್ಧಿ ಕಾರ್ಯಕ್ರಮಗಳನ್ನೊಳಗೊಂಡ ಸಾವಯವ ಭಾಗ್ಯ ಯೋಜನೆಯನ್ನು 2013-14ನೇ ಸಾಲಿನಿಂದ ಜಾರಿಗೆ ತರಲಾಗಿದೆ. ಇದಕ್ಕೆ ಪೂರಕವಾಗಿ, ರಾಷ್ಟ್ರೀಯ ಸಾವಯವ ಮತ್ತು ಸಿರಿಧಾನ್ಯ ಮೇಳವನ್ನು ಕೃಷಿ ಇಲಾಖೆ ವತಿಯಿಂದ ಆಯೋಜಿಸಲಾಗಿರುತ್ತದೆ. ಜನವರಿ 2018ರ ಮಾಹೆಯಲ್ಲಿ ಅಂತರ ರಾಷ್ಟ್ರೀಯ ಸಾವಯವ ಮತ್ತು ಸಿರಿಧಾನ್ಯಗಳ ವಾಣಿಜ್ಯ ಮೇಳವನ್ನು ಏರ್ಪಡಿಸಲಾಗಿದ್ದು, ರಾಜ್ಯದ ಎಲ್ಲಾ ಜಿಲ್ಲೆಗಳಿಂದ ರೈತರು ಭಾಗವಹಿಸಿದ್ದು ಮುಖ್ಯವಾಗಿ ಕಿರುಧಾನ್ಯಗಳ ಮಹತ್ವದ ಬಗ್ಗೆ, ಸಂಸ್ಕರಣೆ, ಮಾರುಕಟ್ಟೆ ಇತ್ಯಾದಿಗಳ ಬಗ್ಗೆ ಪೂರಕವಾಗಿ ಮಾಹಿತಿಯನ್ನು ನೀಡಲಾಗಿದೆ.

**ವಿಶೇಷ ಸೌಲಭ್ಯ:** ಆತ್ಮಹತ್ಯೆ ಮಾಡಿಕೊಂಡ ರೈತರ ಪತ್ನಿಗೆ ರೂ.2000/-ಗಳ ವಿಧವಾ ಮಾಸಾಶನವನ್ನು ಕಂದಾಯ ಇಲಾಖೆಯಿಂದ ನೀಡಲಾಗುತ್ತಿದೆ. ಇಲ್ಲಿಯವರೆಗೆ 3981 ಅರ್ಜಿಗಳನ್ನು ಸ್ವೀಕರಿಸಿದ್ದು 3927 ಮಂದಿ ಮೃತ ರೈತರ ಪತ್ನಿಯರಿಗೆ ವಿಧವಾ ಮಾಸಾಶನವನ್ನು ಕಂದಾಯ ಇಲಾಖೆಯಿಂದ ವಿತರಣೆ ಮಾಡಿರುತ್ತಾರೆ. ಆತ್ಮಹತ್ಯೆ ಮಾಡಿಕೊಂಡ ರೈತರ ಮಕ್ಕಳಿಗೆ ಸ್ನಾತಕೋತ್ತರ ಪದವಿಯ ಹಂತದವರೆಗೆ ಶಿಕ್ಷಣವನ್ನು ಮುಂದುವರಿಸಲು ಅನುವಾಗುವಂತೆ ಉಚಿತ ಶಿಕ್ಷಣ, ಹಾಸ್ಟೆಲ್ ಸೌಲಭ್ಯ ಅಥವಾ ತತ್ಸಮಾನ ಶಿಕ್ಷಣ ಮತ್ತು ವಸತಿ ವೆಚ್ಚದ ಮರುಪಾವತಿ ಮಾಡುವಂತೆ ಅನುಕೂಲ ಕಲ್ಪಿಸಲಾಗುತ್ತಿದೆ. ಇಲ್ಲಿಯವರೆಗೆ 522 ಮಂದಿ ಆತ್ಮಹತ್ಯೆ ಮಾಡಿಕೊಂಡ ರೈತರ ಮಕ್ಕಳಿಗೆ 11,92,864ರೂಗಳ ಶುಲ್ಕಗಳ ಹಣವನ್ನು ಶಿಕ್ಷಣ ಇಲಾಖೆಯವರು ಮರು ಪಾವತಿ ಮಾಡಿರುತ್ತಾರೆ. ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಗಳಿಗೆ "ವಾಜಪೇಯಿ ಆರೋಗ್ಯಶ್ರೀ" ಯೋಜನೆಯಡಿ ಏಳು ಗಂಭೀರ ಖಾಯಿಲೆಗಳಿಗೆ ಸರ್ಕಾರಿ ಹಾಗೂ ನೋಂದಾಯಿತ ಅತ್ಯುತ್ತಮ ದರ್ಜೆಯ ಸ್ಪೆಷಾಲಿಟಿ ಆಸ್ಪತ್ರೆ ಮತ್ತು ಖಾಸಗಿ ಆಸ್ಪತ್ರೆಗಳಲ್ಲಿ ಉಚಿತ ಶಸ್ತ್ರಚಿಕಿತ್ಸೆ ಮತ್ತು ಆರೈಕೆಯ ಸೌಲಭ್ಯವನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಮೂಲಕ ಒದಗಿಸಲು ಮತ್ತು ಇನ್ನುಳಿದ ಇತರ ಪ್ರಾಥಮಿಕ ಹಾಗೂ ಪ್ರೌಢ ಸ್ವರೂಪದ ತಪಾಸಣೆ ಮತ್ತು ಚಿಕಿತ್ಸೆಯನ್ನು ಸರ್ಕಾರಿ ಆಸ್ಪತ್ರೆಗಳಲ್ಲಿ ವಿಶೇಷ ಆರೋಗ್ಯ ಚಿಕಿತ್ಸಾ ಸೌಲಭ್ಯವನ್ನು ನೀಡಲಾಗುತ್ತಿದೆ. ವಿವಿಧ ಜಿಲ್ಲೆಗಳಲ್ಲಿ ಒಟ್ಟು 1906 ಅರ್ಜಿಗಳನ್ನು ಪಡೆದಿದ್ದು ಅದರಲ್ಲಿ 1700 ಮಂದಿ ಆತ್ಮಹತ್ಯೆ ಮಾಡಿಕೊಂಡ ಅರ್ಹ ಕುಟುಂಬದವರಿಗೆ ಸುವರ್ಣ ಆರೋಗ್ಯ ಸುರಕ್ಷಾ ಕಾರ್ಡ್‌ಗಳನ್ನು ಆರೋಗ್ಯ ಇಲಾಖೆಯವರು ವಿತರಣೆ ಮಾಡಿರುತ್ತಾರೆ.

ಕೃಷಿ ನಿರ್ದೇಶಕರು

# ಕರ್ನಾಟಕ ಸರ್ಕಾರ

ಸಂಖ್ಯೆ:ಸಕಇ 629 ಮೊದೇಶಾ 2018

ಕರ್ನಾಟಕ ಸರ್ಕಾರದ ಸಚಿವಾಲಯ
ಸುವರ್ಣಸೌಧ,
ಬೆಳಗಾವಿ. ದಿನಾಂಕ: 13-12-2018

140 U/S
14/12/18

ಇವರಿಂದ:

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಸಮಾಜ ಕಲ್ಯಾಣ ಇಲಾಖೆ,
ಬೆಳಗಾವಿ.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ/~~ಪರಿಷತ್ತು~~,
ಸುವರ್ಣಸೌಧ,
ಬೆಳಗಾವಿ.

ಮಾನ್ಯರೇ,

ವಿಷಯ:- ಮಾನ್ಯ ವಿಧಾನ ಸಭೆ/~~ಪರಿಷತ್~~ ಸದಸ್ಯರಾದ ಶ್ರೀ/ಶ್ರೀಮತಿ ಮುರುಗೇಶ ರುದ್ರಪ್ಪ ನಿರಾಣಿ...... ಇವರ ಚುಕ್ಕೆ ~~ಗುರುತಿನ~~/ಗುರುತಿಲ್ಲದ ಪ್ರಶ್ನೆ ಸಂಖ್ಯೆ:1454/~~ನಿಯಮ-73~~/ /ಗ.ಸೆ.ಸೂ-351 ಕ್ಕೆ ಉತ್ತರಿಸುವ ಬಗ್ಗೆ

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ/~~ಪರಿಷತ್~~ ಸದಸ್ಯರಾದ ಶ್ರೀ/ಶ್ರೀಮತಿ ಮುರುಗೇಶ ರುದ್ರಪ್ಪ ನಿರಾಣಿ ಇವರ ಚುಕ್ಕೆ ~~ಗುರುತಿನ~~/ಗುರುತಿಲ್ಲದ ಪ್ರಶ್ನೆ ಸಂಖ್ಯೆ:1454 /~~ನಿಯಮ-73/ /ಗ.ಸೆ.ಸೂ-351~~ಕ್ಕೆ ಸಂಬಂಧಿಸಿದ ಉತ್ತರದ 300 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಪಿ.ಎಸ್.ನಾಗರಾಜ್)
ಶಾಖಾಧಿಕಾರಿ,
ಸಮಾಜ ಕಲ್ಯಾಣ ಇಲಾಖೆ.



**ಕರ್ನಾಟಕ ವಿಧಾನ ಸಭೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1454
ಸದಸ್ಯರ ಹೆಸರು : ಶ್ರೀ ಮುರುಗೇಶ್ ರುದ್ರಪ್ಪ ನಿರಾಣಿ
ಉತ್ತರಿಸುವ ದಿನಾಂಕ : 14/12/2018
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು

| ಕ್ರಸ | ವಿಷಯ | ಉತ್ತರ |
|---|---|---|
| ಅ | ಬಾಗಲಕೋಟೆ ಜಿಲ್ಲೆಯ ಬೀಳಗಿ ತಾಲ್ಲೂಕಿನ ಅನಗವಾಡಿ ಹೋಬಳಿಗೆ ಪರಿಶಿಷ್ಟ ಜಾತಿಯ ಡಾ.ಬಿ.ಆರ್.ಅಂಬೇಡ್ಕರ್ ವಸತಿ ಶಾಲೆ ಮಂಜೂರಾಗಿರುವುದು ನಿಜವೇ; | ಹೌದು |
| ಆ | ಹಾಗಿದ್ದಲ್ಲಿ, ಸದರಿ ವಸತಿ ಶಾಲೆಗೆ ಸ್ವಂತ ಕಟ್ಟಡ ನಿರ್ಮಾಣ ಮಾಡಲು ಅನಗವಾಡಿ ಹೋಬಳಿಯಲ್ಲಿಯೇ ಸರ್ಕಾರಿ ಜಮೀನು ಲಭ್ಯವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಇ | ಸರ್ಕಾರಿ ಜಮೀನು ಲಭ್ಯವಿದ್ದಾಗ್ಯೂ ಸಹ ಸದರಿ ವಸತಿ ಶಾಲೆಯನ್ನು ಅನಗವಾಡಿ ಹೋಬಳಿಯಿಂದ ಬೇರೆ ಹೋಬಳಿಯ ಗ್ರಾಮಕ್ಕೆ ಸ್ಥಳಾಂತರಿಸಲು ಉದ್ದೇಶಿಸಿರುವುದು ಸರಿಯೇ; | ಹೌದು |
| ಈ | ಹೋಬಳಿಯಿಂದ ಹೋಬಳಿಗೆ ವಸತಿ ಶಾಲೆಯನ್ನು ಸ್ಥಳಾಂತರಿಸಿ ಖಾಸಗಿ ಜಮೀನನ್ನು ಖರೀದಿಸುವ ಉದ್ದೇಶವಾದರೂ ಏನು (ವಿವರ ಒದಗಿಸುವುದು) | ಬಾಗಲಕೋಟೆ ಜಿಲ್ಲೆ, ಬೀಳಗಿ ತಾಲ್ಲೂಕು, ಅನಗವಾಡಿ ಹೋಬಳಿಗೆ ಪರಿಶಿಷ್ಟ ಜಾತಿಯ ಡಾ॥ ಬಿ.ಆರ್ ಅಂಬೇಡ್ಕರ್ ವಸತಿ ಶಾಲೆಯನ್ನು ಸರ್ಕಾರದ ಆದೇಶ ಸಂಖ್ಯೆ: ಸಕಇ 114 ಮೊದೇಶಾ 2016, ದಿನಾಂಕ:14-03-2017ರಲ್ಲಿ ಮಂಜೂರು ಮಾಡಲಾಗಿದೆ. ಈ ಆದೇಶದಲ್ಲಿ **ವಸತಿ ಶಾಲೆ ಮಂಜೂರಾದ ದಿನಾಂಕದಿಂದ 3 ತಿಂಗಳೊಳಗೆ ನಿವೇಶನ ಪಡೆಯತಕ್ಕದ್ದು,** ಒಂದು ವೇಳೆ ವಸತಿ ಶಾಲೆ ಮಂಜೂರಾದ ಹೋಬಳಿಯಲ್ಲಿ ನಿವೇಶನ ಲಭ್ಯವಿಲ್ಲದಿದ್ದಲ್ಲಿ, ನಿವೇಶನ ಲಭ್ಯವಿರುವ ಹೋಬಳಿಗೆ ವಸತಿ ಶಾಲೆಯನ್ನು ಸ್ಥಳಾಂತರಿಸಲಾಗುವುದು ಎಂದು ನಿಬಂಧನೆ ವಿಧಿಸಲಾಗಿದೆ.<br>ಬೀಳಗಿ ತಾಲ್ಲೂಕಿನ ತಹಶೀಲ್ದಾರರು ಮತ್ತು ಪುನರ್ ವಸತಿ ಅಧಿಕಾರಿಯವರ ವರದಿಯಲ್ಲಿ ಅನಗವಾಡಿ ಹೋಬಳಿಯ ವ್ಯಾಪ್ತಿಯಲ್ಲಿ ಯಾವುದೇ ಸರ್ಕಾರಿ ಜಮೀನು ಲಭ್ಯವಿಲ್ಲವೆಂದು ತಿಳಿಸಿರುತ್ತಾರೆ. ಈ ವರದಿಯ ಆಧಾರದ ಮೇಲೆ ಜಿಲ್ಲಾಡಳಿತವು ದಿ: 29-01-2018 ರಂದು ಅನಗವಾಡಿ ಗ್ರಾಮ ಮತ್ತು ಅದರ ಸುತ್ತಮುತ್ತಲಿನ ಗ್ರಾಮಗಳಲ್ಲಿ ಖಾಸಗಿ ಜಮೀನನ್ನು ನೀಡಲು ಪತ್ರಿಕೆ ಪ್ರಕಟಣೆ ನೀಡಲಾಗಿತ್ತು. ಈ ಪ್ರಕಟಣೆಗೆ ಅನಗವಾಡಿಯ |

| | | |
|---|---|---|
| | | ದಿ: 29-01-2018 ರಂದು ಅನಗವಾಡಿ ಗ್ರಾಮ ಮತ್ತು ಅದರ ಸುತ್ತಮುತ್ತಲಿನ ಗ್ರಾಮಗಳಲ್ಲಿ ಖಾಸಗಿ ಜಮೀನನ್ನು ನೀಡಲು ಪತ್ರಿಕೆ ಪ್ರಕಟಣೆ ನೀಡಲಾಗಿತ್ತು. ಈ ಪ್ರಕಟಣೆಗೆ ಅನಗವಾಡಿಯ ಹೋಬಳಿಯ ಸಮೀಪದಲ್ಲಿರುವ ಬೀಳಗಿ ಹೋಬಳಿಯ ಬಾಡಗಂಡಿ ಗ್ರಾಮಸ್ಥರು ಖಾಸಗಿ ಜಮೀನನ್ನು ನೀಡಲು ಒಪ್ಪಿಗೆ ಸೂಚಿಸಿರುತ್ತಾರೆ. ಅದರಂತೆ ಒಪ್ಪಿಗೆ ಸೂಚಿಸಿರುವ ಜಮೀನಿನ ಸ್ಥಳ ಪರಿಶೀಲನೆಯನ್ನು ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಬಾಗಲಕೋಟೆರವರು ಮಾಡಿ, ವಸತಿ ಶಾಲೆಯ ಕಟ್ಟಡ ನಿರ್ಮಾಣಕ್ಕೆ ಯೋಗ್ಯವಾಗಿದೆಯೆಂದು ಅಭಿಪ್ರಾಯ ನೀಡಿರುತ್ತಾರೆ.<br>ಆದುದರಿಂದ ಜಿಲ್ಲಾಧಿಕಾರಿ ಅಧ್ಯಕ್ಷತೆಯ ಜಮೀನು ಖರೀದಿ ಸಮಿತಿಯು ಬಾಡಗಂಡಿ ಗ್ರಾಮದ ಜಮೀನನ್ನು ಖರೀದಿಸಲು ನಿರ್ಧರಿಸಿ, ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.ಈ ಸಮಯದಲ್ಲಿ ಅನಗವಾಡಿ ಗ್ರಾಮದಲ್ಲಿ ಸರ್ಕಾರಿ ಜಮೀನು ಇರುವುದಾಗಿ ತಿಳಿದುಬಂದಿರುತ್ತದೆ. ಆದರೆ, ಬಾಡಗಂಡಿ ಗ್ರಾಮದ ಖಾಸಗಿ ಜಮೀನು ಖರೀದಿಸಲು ಜಮೀನಿನ ಮಾಲೀಕರಿಂದ ಒಪ್ಪಿಗೆ ಪತ್ರ ಪಡೆದಿರುವುದರಿಂದ ಮತ್ತು ವಸತಿ ಶಾಲೆಯ ಮಂಜೂರಾತಿ ಆದೇಶದಂತೆ ಅನಗವಾಡಿಗೆ ಮಂಜೂರಾದ ವಸತಿ ಶಾಲೆಯನ್ನು ಬೀಳಗಿ ಹೋಬಳಿಯ ಬಾಡಗಂಡಿ ಗ್ರಾಮಕ್ಕೆ ಸ್ಥಳಾಂತರಿಸಲಾಗಿದೆ.<br>ಅನಗವಾಡಿ ಹೋಬಳಿಯ ಗ್ರಾಮಸ್ಥರು, ಜನಪ್ರತಿನಿಧಿಗಳು, ಸಂಘಟನೆಗಳು ಮತ್ತು ಸ್ಥಳೀಯ ಶಾಸಕರು ಅನಗವಾಡಿ ಹೊಬಳಿಯಲ್ಲಿಯೇ ವಸತಿ ಶಾಲೆಯನ್ನು ಮುಂದುವರೆಸಲು ಸಲ್ಲಿಸಿರುವ ಮನವಿಗಳನ್ನು ಪುರಸ್ಕರಿಸಿ, ಅನಗವಾಡಿ ಹೋಬಳಿಗೆ ಹೊಸದಾಗಿ ವಸತಿ ಶಾಲೆಯನ್ನು ಮಂಜೂರು ಮಾಡಲು ಸರ್ಕಾರವು ಪರಿಶೀಲಿಸಲು ನಿರ್ಧರಿಸಿದೆ. |
| ಉ | ಖರೀದಿಸಲು ಪ್ರಸ್ತಾಪಿಸಿರುವ ಖಾಸಗಿ ಜಮೀನು ಕಟ್ಟಡ ನಿರ್ಮಾಣಕ್ಕೆ ಸೂಕ್ತವಾಗಿರುವ ಬಗ್ಗೆ ಹಾಗೂ ಕೂಡುರಸ್ತೆ ಹೊಂದಿರುವ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಂದ ಸ್ಥಳ ಪರಿಶೀಲನಾ ವರದಿಯನ್ನು ಪಡೆಯಲಾಗಿದೆಯೇ; ಪಡೆದಿದ್ದಲ್ಲಿ ಪ್ರತಿಯನ್ನು ಒದಗಿಸುವುದು ? | ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಬಾಗಲಕೋಟೆ ಇವರು ಖರೀದಿಗೆ ಪ್ರಸ್ತಾಪಿಸಿರುವ ಜಮೀನನ್ನು ಪರಿಶೀಲಿಸಿ ಕಟ್ಟಡ ನಿರ್ಮಾಣಕ್ಕೆ ಸೂಕ್ತವಾಗಿರುವ ಕುರಿತು ವರದಿ ಸಲ್ಲಿಸಿರುತ್ತಾರೆ (ಪ್ರತಿ ಲಗತ್ತಿಸಿದೆ). |

ಸಕಇ 629 ಮೊದೇಶಾ 2018

(ಪ್ರಿಯಾಂಕ್ ಖರ್ಗೆ)
ಸಮಾಜ ಕಲ್ಯಾಣ ಸಚಿವರು

KPAD (1)

ಕರ್ನಾಟಕ ಸರ್ಕಾರ

ಸಂ:ಸಕಇ/ಲೆಕ್ಕ/ವ.ಶಾ/ನಿವೇಶನ ಖರೀದಿ/ಸಿಆರ್/2018-19

523

ಉಪನಿರ್ದೇಶಕರವರ ಕಛೇರಿ,
ಸಮಾಜ ಕಲ್ಯಾಣ ಇಲಾಖೆ,
ಜಿಲ್ಲಾ ಆಡಳಿತ ಭವನ, ರೂಂ.ನಂ.102,
ನವನಗರ-ಬಾಗಲಕೋಟ,
ದೂರವಾಣಿ ಸಂಖ್ಯೆ:08354-235526
ಇ-ಮೇಲ್:dswobagalkot@gmail.com
ದಿನಾಂಕ: 31.07.2018.

ಗೆ,

ಕಾರ್ಯನಿರ್ವಾಹಕ ನಿರ್ದೇಶಕರು,
ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ,
ಬೆಂಗಳೂರು.

ಮಾನ್ಯರೇ,

ವಿಷಯ:- ಡಾ||ಬಿ.ಆರ್.ಅಂಬೇಡ್ಕರ್ ವಸತಿ ಶಾಲೆ ಅನಗವಾಡಿ ತಾ||ಬೀಳಗಿ ಈ ವಸತಿ ಶಾಲೆಯ ಸ್ವಂತ ಕಟ್ಟಡ ನಿರ್ಮಾಣಕ್ಕಾಗಿ ಖಾಸಗಿ ಜಮೀನು ಖರೀದಿಸಲು ಪ್ರಸ್ತಾವನೆ ಸಲ್ಲಿಸುವ ಕುರಿತು.

ಉಲ್ಲೇಖ:- 1) ಸರ್ಕಾರದ ಆದೇಶ ಸಂಖ್ಯೆ:ಸಕಇ 114 ಮೋದೇಶಾ 2016, ಬೆಂಗಳೂರು ದಿನಾಂಕ:14.03.2017.
2) ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಬೀಳಗಿ ರವರ ಪತ್ರ ದಿನಾಂಕ:05.03.2018.
3) ತಹಶೀಲ್ದಾರರು ಬೀಳಗಿ ರವರ ಪತ್ರ ದಿನಾಂಕ:16.03.2018.
4) ದಿನಾಂಕ:16.07.2018 ರಂದು ಜಿಲ್ಲಾಧಿಕಾರಿಗಳು ಬಾಗಲಕೋಟ ರವರ ಅಧ್ಯಕ್ಷತೆಯಲ್ಲಿ ಜರುಗಿದ ಜಮೀನು ಸಭೆಯ ನಡುವಳಿಗಳು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ (1) ರ ಸರ್ಕಾರಿ ಆದೇಶದಲ್ಲಿ ಡಾ||ಬಿ.ಆರ್.ಅಂಬೇಡ್ಕರ್ ವಸತಿ ಶಾಲೆ ಅನಗವಾಡಿ ತಾ||ಬೀಳಗಿ ವಸತಿ ಶಾಲೆಯು 2016-17ನೇ ಸಾಲಿನಲ್ಲಿ ಮಂಜೂರಾಗಿರುತ್ತದೆ. ಇಲ್ಲಿಯವರೆಗೆ ಸ್ವಂತ ಕಟ್ಟಡ ಇಲ್ಲದೇ ಬಾಡಿಗೆ ಕಟ್ಟಡದಲ್ಲಿ ನಡೆಸಲಾಗುತ್ತಿದೆ. ಉಲ್ಲೇಖಿತ (2) ರ ಪತ್ರದಲ್ಲಿ ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಬೀಳಗಿ ರವರ ಪತ್ರದಡಿಯಲ್ಲಿ ಶ್ರೀ.ಬಸಪ್ಪ ನೀಲಪ್ಪ ಸೂಳಕೇರಿ ಸಾ||ಬಾಡಗಂಡಿ ಹಾಗೂ ಶ್ರೀಮತಿ.ಮಹಾದೇವಿ ನೀಲಪ್ಪ ಸೂಳಕೇರಿ ಸಾ||ಬಾಡಗಂಡಿ ವಸತಿ ಶಾಲೆಯ ಕಟ್ಟಡ ನಿರ್ಮಾಣಕ್ಕಾಗಿ ಇವರ ಮಾಲೀಕತ್ವದ ಶ್ರೀ.ಬಸಪ್ಪ ನೀಲಪ್ಪ ಸೂಳಕೇರಿ ಸರ್ವೇ ನಂ.121/2 5ಎಕರೆ 25ಗುಂಟೆ ಹಾಗೂ ಶ್ರೀಮತಿ.ಮಹಾದೇವಿ ನೀಲಪ್ಪ ಸೂಳಕೇರಿ ಇವರ ಸರ್ವೇ ನಂ:141/2 3ಎಕರೆ 15ಗುಂಟೆ ಹೀಗೆ ಒಟ್ಟು 9 ಎಕರೆ ಜಮೀನು ಮಾರಾಟ ಮಾಡಲು ಒಪ್ಪಿಗೆ ನೀಡಿದ್ದು ದಾಖಲೆಗಳೊಂದಿಗೆ ಖರೀದಿಗಾಗಿ ಪ್ರಸ್ತಾವನೆ ಸಲ್ಲಿಸಿದ್ದು, ಸದರಿ ಜಮೀನನ್ನು ಖರೀದಿಸಲು ದಿನಾಂಕ:16.07.2018 ರಂದು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜರುಗಿದ ಜಿಲ್ಲಾಮಟ್ಟದ ಖರೀದಿ ಸಮಿತಿಯಲ್ಲಿ ನಿರ್ಣಯಿಸಲಾಗಿದೆ. ನಡುವಳಿಕೆ ಪ್ರತಿ ಲಗತ್ತಿಸಿದೆ.

| ಕ್ರ. ಸಂ. | ಭೂ ಮಾಲೀಕರ ಹೆಸರು | ಲಭ್ಯವಿರುವ ಜಮೀನು | ವಸತಿ ನಿಲಯಕ್ಕೆ ಬೇಕಾಗುವ ಜಮೀನು | ಸಭೆಯನ್ನು ನಿರ್ಣಯಿಸಿದ ದರ (ರೂ.ಲಕ್ಷಗಳಲ್ಲಿ) | ಒಟ್ಟು (ರೂ.ಲಕ್ಷಗಳಲ್ಲಿ) |
|---|---|---|---|---|---|
| 1 | ಶ್ರೀ.ಬಸಪ್ಪ ನೀಲಪ್ಪ ಸೂಳಕೇರಿ ಸಾ||ಬಾಡಗಂಡಿ | 5-25 | 9-00 | ಪ್ರತಿ ಎಕರೆಗೆ ರೂ.18.00 ಲಕ್ಷ | 162.00 ಲಕ್ಷ |
| 2 | ಶ್ರೀಮತಿ.ಮಹಾದೇವಿ ನೀಲಪ್ಪ ಸೂಳಕೇರಿ ಸಾ||ಬಾಡಗಂಡಿ | 3-15 | | | |

ಮುಂದುವರಿದಿದೆ.....2.,

